ಕನ್ನಡ

# ಮುಂಡಕೋಪನಿಷತ್ ಭಾಷ್ಯಚಂದ್ರಿಕೆ

(ಲಿಂ॥ ಉಮಚಿಗಿ ಶಂಕರಶಾಸ್ತ್ರಿಕೃತ ಸಂಸ್ಕೃತ ಮೂಲಸಹಿತ)

ಗ್ರಂಥಕರ್ತ
ಆಸ್ಥಾನ ವಿದ್ವಾನ್
ಎಂ. ಜಿ. ನಂಜುಂಡಾರಾಧ್ಯ



ಪ್ರಕಾಶಕರು:
ಪ್ರಬೋಧ ಪುಸ್ತಕ ಮಾಲೆ
ಬಸವೇಶ್ವರ ರಸ್ತೆ, ಮೈಸೂರು.

ಕ ನ್ನ ಡ

# ಮುಂಡಕೋಪನಿಷತ್ ಭಾಷ್ಯ ಚಂದ್ರಿಕೆ

(ಲಿಂ|| ಉಮಚಗಿ ಶಂಕರಶಾಸ್ತ್ರಿಕೃತ ಸಂಸ್ಕೃತ ಮೂಲಸಹಿತ)

ಗ್ರಂಥಕರ್ತ
ಆಸ್ಥಾನ ವಿದ್ವಾನ್
ಎಂ. ಜಿ. ನಂಜುಂಡಾರಾಧ್ಯ

ಪ್ರಕಾಶಕರು:
ಪ್ರಬೋಧ ಪುಸ್ತಕ ಮಾಲೆ
ಬಸವೇಶ್ವರ ರಸ್ತೆ, ಮೈಸೂರು.

# SRI MUNDAKOPANISHAT

OF

## ATHARVAVEDA SAUNAKA SHAKHA

WITH

SAKTI VISISHTADVAITA COMMENTARY

BY

LATE SRI SANKARA SASTRY
Asthana Vidwan, Dharma Ratna,
Umachigi Vrishti Mathaadhyaksha.

EDITED BY

Asthana Vidwan, Sivadvaita Vidyabhushana
Sahitya Ratnam
M. G. NANJUNDARADHYA

Along with Kannada Translation.

PUBLISHED BY
PRABODHA PUSTAKA MALA
BASAVESWARA ROAD
MYSORE 4.



*H. H. Sri Jayachamaraja Wodiyar Bahadur*

G. C. B., G. C. S. I., LL.D.,

GOVERNOR OF MYSORE.

# DEDICATED

*by*

Gracious Permission

*to*

*Sriman Maharaja*

***H. H. Sri Jayachamaraja Wadiyar***
***Bahadur*** G.C.B., G.C.S.I. LL.D.,
Governor of Mysore.

*With Grateful Respects*

*by the Author.*

11.2.7

# FOREWORD

## Mundakopanishad

This is a commentary in Sanskrit on Mundakopanishad. The Mundakopanishad is one of the most important of the classical Upanisads. The present edition of the Upanisad is a commentary according to the Shakti Visistadvaita originally written by the late Umachigi Sankara Sastry. The commentary in Sanskrit is now edited by Asthana Vidwan *Sri M. G. Nanjundaradhya* along with a Kannada translation of the Sanskrit text. The Kannada translation of the Sanskrit commentary makes the book very useful to a large number of readers who may not be knowing Sanskrit. *Sri Nanjundaradhya* renders the Sanskrit commentary into very lucid and readable Kannada. His scholarship in Sanskrit and Kannada is profound.

The Mundakopanishad refers to two Vidyas–*para* and *apara*,'higher knowledge and lower knowledge. While the lower knowledge is the practice of the *karma* *kanda* of the Veda, the higher knowledge is ther ralization of *Brahman*. The commentary in this book interprets the para vidya or higher knowledge as the *Panchaksari vidya*, through which the realization of the *Paramasiva*

*Brahman* is possible. It is also interpreted that the para vidya or higher knowledge is the *karana vidya* or knowledge of the First Principle or the First Cause.

The commentary says that the *Ista Iinga* leads the individual to salvation or *moksa*. It is not through the mere recitation of the veda that salvation is possible, but through the inward possession of the *Ista Iinga*

The commentary on the Mundakopanishad in accordance with the system of Shakti Visistadvaita accepts the principle of non-dualism but it interprets the ultimate reality as the auspicious and gracious Lord Siva and the world as the manifestation of his grace and power. The commentary is an attempt to reconcile the principles of *saguna* and *nirguna* in their interpretation of the highest reality expounded in the Upanisads.

The Upanisads have stated the eternal principles of knowledge and reality. These principles are to be interpreted by successive generations and become the inspiring ideals of life through man's inner experience. As long as man grows richer and richer in his inward experience of the Divine, the

Upanisads will continue to have a guiding influence on his thought and action.

*Sri Nanjundaradhya* deserves the appreciation of all students of the Hindu Darsanas for his lucid translation and exposition of the original Sanskrit commentary.

*21 April 1961.*
University of Mysore.

N. A. NIKAM
*Vice-Chancellor.*

# ಅಭಿವಂದನೆ

ಮೈಸೂರು ವಿಶ್ವವಿದ್ಯಾನಿಲಯದ ಉಪಸ್ಥಾನಪತಿಗಳೂ ವಿಶ್ವವಿಖ್ಯಾತ ವಿದ್ವಾಂಸರೂ ಆದ ಶ್ರೀಮಾನ್ ಪ್ರೊ॥ ಎನ್., ಎ. ನಿಕ್ಕಂ ಎಂ. ಎ. (Cantab) ಅವರು ಸಹೃದಯತೆಯಿಂದ ಈ ಭಾಷ್ಯವನ್ನು ಪರಿಶೀಲಿಸಿ ವಿಚಾರ ಪರಿಪ್ಲುತವಾದ ಮುನ್ನುಡಿಯನ್ನು ಬರೆದು ಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ಕೃತಜ್ಞತಾಪೂರ್ವಕವಾದ ಅಭಿವಂದನೆಗಳನ್ನು ಸಮರ್ಪಿಸುತ್ತೇನೆ.

ಈ ಭಾಷ್ಯವನ್ನು ಮೈಸೂರು ಸಂಸ್ಥಾನದ ಶಕ್ತಿವಿಶಿಷ್ಟಾದ್ವೈತ ವಿದ್ವತ್ ಪರೀಕ್ಷೆಗೆ ಪಠ್ಯ ಪುಸ್ತಕವಾಗಿ ನೇಮಿಸಿರುವುದಕ್ಕಾಗಿ ವಿದ್ಯಾ ಇಲಾಖೆಯ ಡೈರೆಕ್ಟರ್ ಅವರಿಗೂ ಪರೀಕ್ಷಾ ಸಮಿತಿ ಸದಸ್ಯರಿಗೂ ಕೃತಜ್ಞತಾಪೂರ್ವಕವಾದ ಅಭಿವಂದನೆಗಳು.

ಸಂಪಾದಕ.

# ಪ್ರಸ್ತಾವನೆ

ಭಾರತೀಯರ ಆಧ್ಯಾತ್ಮ ವೈಭವಕ್ಕೆ ಉಪನಿಷತ್ ತತ್ತ್ವಜ್ಞಾನ ಚರಮ ಸೀಮೆ. ಉಪನಿಷತ್ತು ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳು ಪ್ರಸ್ಥಾನತ್ರಯ ವೆನಿಸಿ ಈ ಸೀಮೆಯ ತ್ರಿಕೂಟವೆನಿಸಿವೆ.

ಪ್ರಸ್ಥಾನ ತ್ರಯಕ್ಕೆ ಮತತ್ರಯದ ಶಂಕರ, ರಾಮಾನುಜ ಮತ್ತು ಮಧ್ವ ಆಚಾರ್ಯರು ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಮತಗಳ ಪರವಾಗಿ ಭಾಷ್ಯಗಳನ್ನು ಬರೆದು ಮತಾಚಾರ್ಯರೆನಿಸಿದ್ದಾರೆ. ವೀರಶೈವ ಮತಾಚಾರ್ಯರು ಪ್ರಸ್ಥಾನತ್ರಯದಲ್ಲಿ ಮುಖ್ಯವಾದ ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳಿಗೆ ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ ಅಥವಾ ವಿಶೇಷಾದ್ವೈತವೆಂಬ ಹೆಸರುಗಳಿಂದ ಭಾಷ್ಯಗಳನ್ನು ರಚಿಸಿರುತ್ತಾರೆ. ವೀರಶೈವ ಮತಸ್ಥಾಪಕರೆನಿಸಿರುವ ಭಗವತ್ಪಾದ ರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗೆ ಬೋಧಿಸಿರುವ ಏಕೋತ್ತರ ಶತಸ್ಥಲಾತ್ಮಕವಾದ ರೇಣುಕಗೀತೆ ಅಥವಾ ಸಿದ್ಧಾಂತಶಿಖಾಮಣಿಯು ಪ್ರಸ್ಥಾನತ್ರಯದಲ್ಲೊಂದಾದ ಭಗವದ್ಗೀತೆಯ ಸ್ಥಾನವನ್ನು ಅಲಂಕರಿದೆ.

ಶ್ರೀಪತಿಪಂಡಿತಾರಾಧ್ಯರು ಬ್ರಹ್ಮಸೂತ್ರಗಳಿಗೆ ಬರೆದಿರುವ ಭಾಷ್ಯವು ವಿಶೇಷಾದ್ವೈತ ಅಥವಾ ದ್ವೈತಾದ್ವೈತ ಎಂದು ಹೇಳಲಾಗಿದೆ. ಸುಪ್ರಸಿದ್ಧ ಕ್ರಿಯಾಸಾರ ಕರ್ತೃಗಳಾದ ನೀಲಕಂಠಶಿವಾಚಾರ್ಯರು (ಕ್ರಿ. ಶ. ೧೪೦೦) ತಮ್ಮ ಕೃತಿಯು ಪೂರ್ವಾಚಾರ್ಯರಾಗಿದ್ದ ನೀಲಕಂಠಶಿವಾಚಾರ್ಯರ ವಿಶಿಷ್ಟಾದ್ವೈತ ಭಾಷ್ಯದ ಕಾರಿಕಾ ರೂಪವೆಂದು ಹೇಳಿದ್ದಾರೆ. ಅವರು

"ತಸ್ಮಾತ್ ಶಕ್ತಿವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಕೃತಾ" ಎಂಬ ಕಾರಿಕೆಯಲ್ಲಿ ಬ್ರಹ್ಮನ ಶಕ್ತಿವಿಶಿಷ್ಟತ್ವವನ್ನು ಸ್ಥಾಪಿಸುವುದರ ಮೂಲಕ ತಮ್ಮ ಭಾಷ್ಯಕಾರಿಕೆಯು ಶಕ್ತಿವಿಶಿಷ್ಟಾದ್ವೈತ ಪರವೆಂದು ಸೂಚಿಸಿರುತ್ತಾರೆ. ಮೇಲಾಗಿ ಮಂಚಣಪಂಡಿತ, ಮಾಯಿದೇವ, ಉದ್ಭಟಾರಾಧ್ಯ, ವೇಮನಾರಾಧ್ಯ, ಮಲ್ಲಿಕಾರ್ಜುನಪಂಡಿತಾರಾಧ್ಯರು ವೇದೋಪನಿಷನ್ಮಂತ್ರಗಳಿಗೆ ಶಿವಾದ್ವೈತ ಪರವಾಗಿ ಭಾಷ್ಯಾದಿಗಳನ್ನು ಬರೆದಿದ್ದ ಅಂಶವು ಲಿಂಗಧಾರಣಚಂದ್ರಿಕಾ, ವೀರಶೈವ ಸದಾಚಾರ ಸಂಗ್ರಹ ಮುಂತಾದ ಗ್ರಂಥಗಳಲ್ಲಿ ಉಲ್ಲಿಖಿತ

ವಾಗಿದೆ. ಮಹಾಪಂಡಿತರಾದ ವೃಷಭಪಂಡಿತಾರಾಧ್ಯರು ತೈತ್ತಿರೀಯೋಪನಿಷತ್ತು, ಪುರುಷಸೂಕ್ತ ಮುಂತಾದವುಗಳಿಗೂ ಸೋಸಲೆ ರೇವಣಾರಾಧ್ಯ ಮುಂತಾದವರು ಶತರುದ್ರೀಯ, ಶ್ರುತಿಸಾರಭಾಷ್ಯ ಮುಂತಾದವುಗಳಿಗೂ ಬರೆದಿರುವ ಭಾಷ್ಯಗಳು ಇಂದಿಗೂ ಕಂಗೊಳಿಸುತ್ತಿವೆ.

ಪ್ರಾಚೀನಾಚಾರ್ಯರು ಮಾತ್ರವಲ್ಲದೆ ಇದೇ ಶತಮಾನದ ಆದಿ ಭಾಗದಲ್ಲಿ ಅವತರಿಸಿದ ಲಿ॥ ಉಮಚಿಗಿ ಶಂಕರಶಾಸ್ತ್ರಿಗಳು ಈಶ, ಕೇನ, ಸಿದ್ಧಾಂತಶಿಖಾ, ಮುಂಡಕ ಉಪನಿಷತ್ತುಗಳಿಗೆ ವೀರಶೈವ ಸಿದ್ಧಾಂತ ಪರವಾಗಿ ಭಾಷ್ಯಗಳನ್ನು ಬರೆದಿರುತ್ತಾರೆ. ಇವುಗಳಲ್ಲಿ ಮೊದಲ ಮೂರು ಕ್ರಮವಾಗಿ ೧೯೩೦, ೧೯೩೩, ೧೯೩೭ ನೇ ಇಸವಿಗಳಲ್ಲಿ ಪ್ರಕಟವಾಗಿವೆ. ಮುಂಡಕ ಭಾಷ್ಯವು ಇದೀಗ ಬೆಳಕಿಗೆ ಬಂದಿದೆ. ಇವರು ರಚಿಸಿರುವ "ಬ್ರಹ್ಮಸೂತ್ರವೃತ್ತಿ" ಎಂಬ ಅಪೂರ್ಣ ಗ್ರಂಥವೊಂದು ಪ್ರಕಟವಾಗಲಿದೆ. ಮುಂಡಕೋಪನಿಷತ್ತಿನ ಕಡೆಯಲ್ಲಿರುವ

ವಿಯದ್ವೃತುವಸುಬ್ರಹಮಿತೇಽಬ್ದೇ ಶಾಲಿವಾಹನೇ।
ಚತುರ್ಥ್ಯಾಂ ಚೈತ್ರಶುಕ್ಲಸ್ಯ ಭಾಷ್ಯಮೇತತ್ಸಮಾಪಿತಮ್॥

ಎಂಬ ಶ್ಲೋಕದಿಂದ ಇದು ಕ್ರಿ. ಶ. ೧೯೩೮ ರಲ್ಲಿಯೇ ಪೂರ್ಣವಾಗಿತ್ತೆಂದು ತಿಳಿದು ಬರುತ್ತದೆ.

## ಮುಂಡಕ ಭಾಷ್ಯದ ವೈಶಿಷ್ಟ್ಯ

ಮುಂಡಕೋಪನಿಷತ್ ಭಾಷ್ಯವು ಶಾಸ್ತ್ರಿಗಳ ಪಾಂಡಿತ್ಯಾನುಭವಗಳು ಪರಿಪಕ್ವವಾದ ಕಾಲದಲ್ಲಿ ರಚಿತವಾದದ್ದೆಂದು ಗ್ರಂಥಶೈಲಿ ಹಾಗೂ ವಿಷಯ ಪ್ರತಿಪಾದನೆಗಳಿಂದ ಸ್ಪಷ್ಟವಾಗುತ್ತದೆ. ಶಾಸ್ತ್ರಿಗಳಿಗೆ ಸಂಸ್ಕೃತ ಭಾಷೆಯಲ್ಲಿದ್ದ ಸ್ವಾಮ್ಯ, ವೇದವೇದಾಂತಾಗಮ ಪೂರ್ವೋತ್ತರ ಮೀಮಾಂಸಾದಿಶಾಸ್ತ್ರಗಳಲ್ಲಿದ್ದ ವೈದಗ್ಧ್ಯ, ವಿಷಯನಿರೂಪಣವಿನ್ಯಾಸಗಳಲ್ಲಿದ್ದ ಚಾತುರ್ಯ, ಮೇಲಾಗಿ ಮಂತ್ರಗಳನ್ನು ಸ್ವಮತಾನುಗುಣವಾಗಿ ನಯನಮಾಡುವುದರಲ್ಲಿ ಅವರಿಗಿದ್ದ ಪ್ರತ್ಯುತ್ಪನ್ನಮತಿ ಹಾಗೂ ಪ್ರತಿಭೆಗಳಿಗೆ ಮುಂಡಕಭಾಷ್ಯ ಒರೆಗಲ್ಲಿನಂತಿದೆ.

ಮುಂಡಕೋಪನಿಷತ್ತಿನಲ್ಲಿ ಪ್ರತಿಪಾದಿತವಾಗಿರುವ ಶಿರೋವ್ರತವೂ (ಮುಂ ೩, ೨-೧೦) ಅಥರ್ವಶಿರಸ್ಸಿನಲ್ಲಿ ಉಕ್ತವಾಗಿರುವ ಪಾಶುಪತಾಭಿಧ

ಶಿರೋವ್ರತವೂ ಒಂದೇ.

ವ್ರತಂ ಪಾಶುಪತಂ ಚೀರ್ಣಂ ಯೈರ್ದ್ವಿಜೈರಾದರೇಣ ತು ।
ತೇಷಾಮೇವೋಪದೇಷ್ಟವ್ಯಮಿತಿ ವೇದಾನುಶಾಸನಮ್ ॥

–ಸೂತಸಂಹಿತಾ.

ಅಥವಾಥರ್ವಣೈರ್ಮಂತ್ರೈರ್ಗೃಹೀತ್ವಾ ಭಸ್ಮಪಾಂಡುರಮ್ ।
ಸರ್ವಾಂಗೋದ್ಧೂಲನಂ ಯತ್ತತ್ ವ್ರತಂ ಪ್ರೋಕ್ತಂ ಮನೀಷಿಭಿಃ ॥
ಏತದ್ವೇದಶಿರೋನಿಷ್ಠಾಃ ಪ್ರಾಹುಃ ಪಾಶುಪತಂ ಮುನೇ ।
ಕೇಚಿತ್ ಶಿರೋವ್ರತಂ ಪ್ರಾಹುಃ ಕೇಚಿದತ್ಯಾಶ್ರಮಂ ಬುಧಾಃ ॥

ಕ್ರಿಯಾಸಾರ 3, 27, ಪು. 183.

ಮುಂತಾದ ಪ್ರಮಾಣಗಳಿಂದ ಮುಂಡಕೋಕ್ತವಾದ ಶಿರೋವ್ರತವು ಲಿಂಗಧಾರಣಾತ್ಮಕ ಪಾಶುಪತ ವೆಂದು ಸಾಧಿಸಲಾಗಿದೆ. ಮೇಲಾಗಿ ಈ ಉಪನಿಷತ್ತಿನ ಪ್ರಾರಂಭದಲ್ಲಿ ಬರುವ "ಪರಾಪರವಿದ್ಯೆ" ಗಳ ವಿಚಾರವನ್ನು ವಿವರಿಸುವಾಗ ಪಂಚಾಕ್ಷರೀ ವಿದ್ಯೆಯೇ ಮಂತ್ರಮಾತೃವೆನಿಸಿರುವ ಪರಾವಿದ್ಯೆ. ಉಳಿದ ಋಗಾದಿವೇದಗಳು ಅಪರವಿದ್ಯೆಯೆಂದು ಮಾಡಿರುವ ವ್ಯಾಖ್ಯಾನವು ಸಹೃದಯರನ್ನು ತಲೆದೂಗಿಸುವಂತಹುದು. ಮುಂದೆ "ನಾಯಮಾತ್ಮಾಬಲಹೀನೇನ ಲಭ್ಯಃ" "ನ ಚ ಪ್ರಮಾದಾತ್ ತಪಸೋ ವಾಪ್ಯಲಿಂಗಾತ್" (ಮುಂ. 3. 2. 4.) ಎಂಬ ಮಂತ್ರಭಾಷ್ಯದಲ್ಲಿ ಲಿಂಗಧಾರಣಾತ್ಮಕ ಶಿವ ದೀಕ್ಷೆಯಿಲ್ಲದವನಿಗೆ ಭಗವತ್ಸಾಕ್ಷಾತ್ಕಾರ ಲಭ್ಯವಾಗುವುದಿಲ್ಲ ವೆಂಬುದನ್ನು ಯುಕ್ತಿಪ್ರಮಾಣಗಳಿಂದ ಸಿದ್ಧಾಂತಪಡಿಸಲಾಗಿದೆ.

ಇತಂಹ ಅಪೂರ್ವಪ್ರತಿಭಾನುಭವ ವೈಭವೋಪೇತವಾದ ಈ ಭಾಷ್ಯದ ಪ್ರತಿಮಂತ್ರದಲ್ಲಿಯೂ ತನ್ನದೇ ಆದ ವೈಶಿಷ್ಟ್ಯವನ್ನು ಪ್ರದರ್ಶಿಸಲಾಗಿದೆ. ಶಾಸ್ತ್ರಗಳಿಂದ ಇನ್ನೂ ಹೆಚ್ಚಿನ ಸೇವೆ ಪಡೆಯುವ ಭಾಗ್ಯಸಮಾಜಕ್ಕಾಗಲಿಲ್ಲ ವೆಂಬ ಕೊರಗು ಮಾತ್ರ ಸಹೃದಯರನ್ನು ಬಾಧಿಸದೆ ಇರಲಾರದು.

ಇಂತಹ ಭಾಷ್ಯದ ಸಂಪೂರ್ಣ ಭಾಷಾಂತರವನ್ನು ಸರಲ ಕನ್ನಡದಲ್ಲಿ ಮಾಡಿದ್ದರೂ ಅದನ್ನು ಪ್ರಕಟಿಸಲು ಸಮಾಜದಿಂದ ಸಹಕಾರವು ದೊರೆಯದಿದ್ದುದಕ್ಕಾಗಿ ವಿಷಾದಿಸಿ ಅದರ ಸಂಗ್ರಹವನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಇದಿಷ್ಟನ್ನಾದರೂ ತತ್ತ್ವಜಿಜ್ಞಾಸುಗಳು ಅವಲೋಕಿಸಿ ಕೃತಕೃತ್ಯರಾಗುವರೆಂದು ಆಶಿಸುತ್ತೇನೆ.

೧೦-೬-೧೯೬೧ }
ಮೈಸೂರು }

ಎಂ. ಜಿ. ನಂಜುಂಡಾರಾಧ್ಯ

# उपोद्घातः

विश्वस्य तत्त्वशास्त्राणां साहित्यक्षेत्रे उपनिषद्भिः प्रधानं स्थानमाक्रान्तम् । पाश्चात्यतत्त्वशास्त्रपारीणाः साहित्यसंशोधकाश्च उपनिषदां प्राधान्यं मुक्तकण्ठं शंसन्ति । तेषु अत्याधुनिक विश्वैकदेवतावादी आर्थर् षोपन्होर् (Arthur Schopenhuer) एवमवादीत्— 'उपनिषदध्ययनं ममात्यन्तफलप्रदं उत्कर्षाधायकं च । ताश्च मम जीवने मरणकालेऽपि च शान्तिप्रदा इति मन्ये' इति । तद्रचिततत्त्वशास्त्रे उपनिषत्सिद्धान्ताः ओतप्रोततया विमिश्रिताः[1] ।

शर्मण्यदेशीय कील् (Keil) विश्वविद्यानिलयस्य प्रो. डाय्सन् (Deussen) महाशयः 'उपनिषत्सु पार्मिनैडिस् (Parmenides), प्लेटो (Plato), क्यांट् (Kant) प्रभृतीनां सिद्धान्ताः संदृश्यन्ते' इत्युक्त्वा स्वदेशनिर्गमनावसरे एवमवदत्— 'वेदान्तस्य निसर्गोपदेशाः निष्कलङ्क नीतिशास्त्रस्याधारभूताः जीवनस्य मरणस्य च क्लेशोपशमने महासाधनीभूताः । अत एव भारतीयाः, तान् दृढं अनुतिष्ठत ।'[2] इति ।

प्रो. जे. एस्. मेकिंज़ी (Prof. J. S. Mackenzie) महाशयः – 'सुव्यवस्थितविश्वरचनामधिकृत्य प्रवृत्ते वादे

---

[1] Thirteen Principal Upanishads by Hume, Pp. 3-4. 1934.

[2] Thirteen Principal Upanishads, P. 4.

प्रथमं प्रवर्तितः स्वरसः असाधारणश्च वादः उपनिषत्सु उल्लेखितः ' इत्युद्घोषयामास [3] ।

न्यूयार्क् नगरस्य मतेतिहासप्रधानाध्यापकः डा॥ ह्यूम् (Dr. Hume) महाशयः ' उपनिषत्सु प्रतिपादितः एकतत्त्ववादः पाश्चात्यैकतत्त्ववादस्योपरि न केवलं प्रभावमुन्मेषयामास, किन्तु उत्तरत्रापि प्रकाशं प्रसारयिष्यति ; यतः आध्यात्मिकानुभवजिज्ञासुभिः सर्वैरपि गृह्यमाणानि सत्यांशानां मूलतत्त्वानि उपनिषत्सु प्रगाढं निरूढानि ' इति जगाद [4] ।

भारते तावदुपनिषदां स्थानमसदृशम् । ताः वेदान्तशब्देनाभिधीयन्ते । वेदानामन्ताः ताः वेदसारमेवोपदिशन्तीति विज्ञायते । उपदेशनार्थकः ' सद् ' धातुः उप+नि उपसर्गद्वयसंयोगात् समीपोपवेशनं सूचयति । अर्थात् श्रद्धासक्तिभक्तिभिस्सद्गुरुमभिगम्य ब्रह्मजिज्ञासुनाऽधिकारिणा स्वीक्रियमाणोपदेशसङ्ग्रहः उपनिषदित्यवधार्यते । सा चेयमुपनिषत् मानवीयान्तरंगिकानुभावसहकारेण सिद्धं सत्यमुन्मेषयति । उपनिषद्युगीयानां अनुभाविनां धर्मस्फूर्तेः श्रुतिर्मूलम् । ' वैदिकार्याः अत्युच्चतत्त्ववेदिनो आसन् । न

[3] Ind. Philosophy by Dr. S. Radhakrishnan, vol. I, p. 139, 1941.

[4] Thirteen Principal Upanishads, Pp. 4-5, 1934.

केवलं ते निसर्गतत्त्वोपदेशकाः, किन्तु एकमेवाद्वितीयस्य परवस्तुनः परिपूर्णानुभवोऽपि तेषामासीदित्यवगम्यते । अन्यच्च स्लेगल्, रे. ब्राइस्, रे. वार्ड, चार्लस् कोलमन्, कोल्ब्रूक्, कौंट् जास् जर्ना प्रभृतयः पूर्वोक्ता विद्वद्वरेण्याश्च वेदाभ्यासिनः एकदेवताकल्पनामूलं वेदमेवेति स्वकीयग्रन्थेषु लिलिखुः। किंच तत्त्वज्ञानविषये ऋग्वेदीय नासदीयसूक्तोदाहरणमेवालम् । यतस्तत्र मन्त्रद्रष्टॄणां महर्षीणां तत्त्वजिज्ञासा विचारशक्त्याः सीमानमुल्लङ्घ्य कथं प्रास्फुरदित्यवगम्यते [5] ।

वेदधर्मेण स्फूर्तिमतां उपनिषत्कालिकानां योगस्थानुभाविनां उपदेशरूपाः मन्त्राः उपनिषत्सु विलसन्ति । अत एवोपनिषद्धर्मः वैदिकसंस्कृतेः स्वर्णकलशो भूत्वा तत्त्वज्ञाननभोमण्डलस्य ध्रुवतारेव विराजते ।

योगस्थितौ शुद्धचैतन्यप्रतिभाप्रकाशेनोन्मिषितं सत्यं ललितसुभगया शैल्या महर्षय उपादिशन् । अनन्तशक्तेः परमात्मनः दिव्यसन्दर्शनानन्दतुन्दिला मुनयः आत्मानन्दतन्मयास्सन्तः शब्दसृष्टेः सार्वभौमा ज्ञानशिल्पिन इव दरीदृश्यन्ते । तेषामन्तर्वाण्यैवोपनिषत् ।

उपनिषद्वाणी तावदियं दिव्यध्वनिरिव तत्तत्संस्कार-

---

[5] R. R. ದಿವಾಕರರ ಉಪನಿಷತ್ಪ್ರಕಾಶದ ಪ್ರಸ್ತಾವನೆ, ಪುಟ ೩೧-೩೨.

संस्कृतिवतां अधिकारिणां विभिन्नरूपेणानुभूयते । कश्चन विज्ञानी एकैकं पत्रशकलं (peace of paper) एकैकस्य दत्वा आस्वादयितुमाशास्ते । तदेकस्मै मधुरं, अन्यस्मै तिक्तं, अपरस्मै लवणमित्यादि रूपेणानुभवास्पदं परिणमति ।

तद्रुचिवैविध्यं न पत्रशकलनिष्ठं किन्तु व्यक्त्याश्रितमिति सर्वानुभूतमेव । अत एवोक्तं महाकविना 'भिन्नरुचिर्हि लोकः' इति । यथा चैक एव शिवगङ्गाद्रिः (Sivaganga in Bangalore District) पूर्वादिक्रमेण वृषभः, गणपतिः, नागेन्द्रः, शिवलिङ्गं. इत्याकारेण प्रतिदिशि विभिन्नेनैव रूपेण प्रतिभाति। एवं तत्त्वान्वेषकाणां सर्वेषां जिज्ञासूनां लक्ष्यमेकमेव । तथाचोक्तं पुष्पदन्तेन महात्मना महिम्नस्तवे, 'रुचीनां वैचित्र्यात् ऋजुकुटिलनाना पथजुषां, नृणामेको गम्यस्त्वमसि पयसामर्णव इव' इति । मृग्याभेदेऽपि मार्गभेदस्य संभवः' इत्युक्तत्वाच्च ।

दिव्यध्वनिस्वरूपायाः भगवद्वाण्याः विभिन्नभाषात्मकत्वं इत्थं प्रतिपादितं पण्डितप्रकाण्डेन भट्टाकळङ्केन—

'ननु एकस्या एव भगवद्वाण्याः नानाभाषात्मकत्वं कथमुपपद्यत इति चेत्– दिव्यध्वनेरयमचिन्त्यमहिमा स्वभावः; यथा प्रावृट्काले नभस्थलात् पतितमान्तरिक्षं जलं एकमव्यक्तरसमपि लवणकृष्णोषरादिक्षेत्रगतं सत् तदेव लवणमधुरकषायरसभेदभिन्नं नानात्मकमनुभूयते ; यथा च स्फट-

त्काले स्वातीस्थे दिवाकरे शुभ्रादभ्रमेघात् प्रभ्रष्टमाभ्रं जलमेकमेव ताम्रपर्णी शुक्ति सप्तच्छदाद्यधिकरणगतं सत् मौक्तिककर्पूराद्यनेकाकारपरिणतमखिलधरणीप्रसिद्धमनुभूयते । यथा वा वृक्षवाटिकायां कुल्याजलमेकरसमेकमेव नानातरुवीरुद्गुल्मादि मूलदेशकृतालवालं प्राप्य, तत्तदंघ्रिपीतं सत् तत्तत्फलमासाद्य मधुराम्लकटुकादि नानारसात्मना परिणतं सत् अनेकविधमखिलजनानुभवसाक्षिकमास्वाद्यते । तथा भगवद्भाषापि स्वोत्पत्तिसमये समुद्रघोषवत् अव्यक्तैकभाषारूपापि तत्तच्छ्रोत्रदेशं प्राप्ता सती तत्तद्भाषात्मना परिणमति विचित्रशक्तित्वात् '। [6]

अत्र दिव्यध्वन्यात्मकः शब्दः यथा नानाभाषात्मना परिणमति तथा तादृशशब्दे अविनाभावसंबन्धेन विद्यमानार्थोऽपि अधिकारिभेदेन नानातत्त्वात्मकतया प्रतिभातीत्यत्र न कापि विप्रतिपत्तिः प्रतिभाति । उद्रिक्तसत्वावस्थायां योगस्थानां मुनिपुङ्गवानां अन्तर्वाणीस्वरूपोपनिषदनुष्ठानवतां शङ्कराद्याचार्याणां एकमेव सत्यं द्वैताद्वैतविशिष्टाद्वैतशक्तिविशिष्टाद्वैताद्यात्मना भाने किमप्याश्चर्यमसंगतं वा संदृश्यते। अस्मिन् विषये अत्याधुनिकतत्त्वशास्त्रवेत्ता आर्. डि. रानडे (R. D. Ranade) महोदयस्याशयोऽयम्— 'प्रतिदिशं प्रवहन्तीनां नदीनां पर्वत इव उपनिषद एव तत्त्वशास्त्राणां

---

[6] भट्टाकलङ्ककृत कर्णाटकशब्दानुशासनम्, p. 9-10.

मूलम् । ताभिः नानाविधाः आलोचनात्मकाः उपनद्यः उद्भूय जीवनसागरं प्रति प्रवहन्ति । स्वस्वबुद्धिवैचित्र्यात् संजातानां उपशाखास्वरूपाणां उपनदीनां सङ्गमेन परिपुष्टाभिस्ताभिः जीवनसागरसंगमक्षेत्रे तत्त्वशास्त्रस्य सुविशालं जलपात्रं विनिर्मितम् । एवं जैन बौद्ध सांख्य योग-शैवमीमांसादीनां द्वैताद्वैतविशिष्टाद्वैतपथानां च मूलानि उपनिषत्सु संदृश्यन्ते । अत एव उपनिषदः एकमेव सिद्धान्तं प्रतिपादयन्तीति न केनापि वक्तुं शक्यते । ' [7]

एतेन मन्त्रद्रष्टारो महर्षयः अन्तरात्मप्रेरणयोन्मिषितानां भावनानां स्वरूपं हृदयङ्गमया सरलसुभगया भाषया प्रकाशयामासुः । तेषां च आलोचनान्तरङ्गेषु स्वयंप्रेरितभावजनितनिरूपणानि उपनिषत्सु संदृश्यन्ते ।

श्रुतित्वेन प्रसिद्धाः उपनिषदः अपौरुषेया इति ताः प्रमाणभूताः पवित्राश्चेति अङ्गीकृताः । संप्रदायसम्मताः सर्वे पन्थानोऽपि स्वाभिमतार्थसमर्थनाय उपनिषदः उदाहरन्ति । उपनिषत्सु अभिप्रायस्वातन्त्र्यस्य, अर्थवैशाल्यस्य चावकाशतया तत्त्वजिज्ञासायाः विविधछायाभिमतं प्रामाण्यान्वेषणं सुकरमेव । अत एव उत्तरोत्तरकालेषु स्वस्वमता-

---

[7] E. H. I P., Vol. 2. A Constructive Survey of Upanishadic Philosophy, 1926, P. 179.

भिव्यञ्जकाः विविधाः पन्थानः समभवन् । स्वमताशयसमर्थनाय प्राचीनोपनिषद्भिः प्रामाण्यप्रदर्शने अवकाशाभावे प्राचीनोपनिषदनुकरणरूपेण अन्योपनिषद अपि आविर्भूताः । अत एवेदानीं उपनिषदां संख्या २३९ (एकोनचत्वारिंशदुत्तरशतद्वयपरिमिता दृश्यते । [8]

एताः सर्वाः प्राचीनोपनिषद इति नाङ्गीकर्तुं शक्यते । तासु प्राचीनत्वार्वाचीनत्वनिर्णयाय विमर्शकैः कानिचित् कारणानि निर्दिष्टानि । उपनिषदां भाषा, शैली, शब्दकोशः, व्याकरणवैशिष्ट्यं, विषयनिर्देशः, यज्ञस्योपरि ब्राह्मणस्य प्रभावः, मन्त्रः (ऐन्द्रजालिकः), व्रतं, फलश्रुतिः, तत्त्वाभिप्रायाणां ऐतिहासिकी प्रगतिश्च इत्यादीनां पर्यालोचनया उपनिषदां पौर्वापर्यं निर्णीयते ।

प्राचीनोपनिषदस्तु क्रिस्तात् पूर्वं माकीं ६०० वर्षाणां प्राक्बुद्धजन्मकालिकाः इति ज्ञायन्ते । केषांचिदाशयानुसारेण तासां संख्या दश इति । अन्येषामाशयानुरोधेन त्रयोदश इति परिगण्यते ।

तत्र प्राचीनोपनिषदां क्रम इत्थं सूच्यते — बृहदारण्यकं, छान्दोग्यं, तैत्तिरीयं, ऐतरेयं, कौषीतकी, केन, कठ, ईश, मुण्डक, प्रश्न, माण्डूक्य, श्वेताश्वेतर, मैत्रेयी इति । उपर्यु-

---

[8] Upanishadvakya Mahakosa by Sattiavelkar Sastri. 1940–41.

कपङ्क्तिकायां प्राथमिकाष्षट् अत्यन्तप्राचीना इति परि-गणिताः । एतत्त्रयोदशातिगाः सर्वा अर्वाचीना इति निर्णीताः ।

## उपनिषदां ध्येयम्.

उपनिषद्द्रष्टारः अमोघतपःप्रभावेण दुःखमूलं समीचीन-मजानन् । तेषां ध्येयन्तु जीवात्मानं कर्मबन्धात् मोचयित्वा आत्मज्ञानद्वारा अमृतत्वाभिमुखीकरणमेव । उपनिषदां प्रयो-जनं तु प्रेयो (प्रापञ्चिकविषये) मग्नस्य जीवात्मनः नश्वरत्वेन तत्र जिहासामुत्पाद्य श्रेयोजीवनाभिमुखीकरणम् । किञ्च न केवलमतीन्द्रिय पारलौकिकज्ञानं उपनिषद्बोधयति । किन्तु समाजभद्रतायाः आधारनैतिकभित्तिं दृढीकृत्य अभ्युदया-त्मकं लौकिकजीवनं अनासक्तिनौकाद्वारा संसारसागरं संतार्य, अपुनर्भवरूप निरतिशयानन्दप्राप्तिरेव तासां तात्प-र्यमित्यवगन्तव्यम् । न केवलं तत्र तार्किकवादविवादाना-मवकाशोऽस्ति । 'न हि तर्केणानुसन्धत्ते' इति बौद्धिक-वादमाटीकितं तत्र ; युक्तेरप्रतिष्ठानात् ।

साकल्येन आदर्शजीवन सात्त्विकाहार मनोनैर्मल्य इन्द्रि-यनिग्रह अनासक्ति सदाचारात्मार्पण सर्वत्रेश्वरतादात्म्यादि-प्रकटनमेव उपनिषदां हृदयम् ।

'तमसो मा ज्योतिर्गमय ।
असतो मा सद्गमय ।
मृत्योर्मामृतं गमय ॥'

इति मन्त्रार्थरूप अमरसन्देशः मानवसामान्यस्य प्रतिहृदयमुन्मिषन् प्रतिदिक्षु व्याप्नुवन् भारतसंस्कृतेः ओजोऽभिवर्धयति ।

## मुण्डकभाष्यवैशिष्ट्यम्.

प्राचीनत्वेन परिगणितासु उपनिषत्सु द्वितीयं स्थानं अलंकुर्वतः मुण्डकस्य कालनिर्णयः अप्रस्तुत एव । प्रस्थानत्रये समाविष्टा उपनिषदः प्रायः दश एव । तत्र मुण्डकस्य स्थानं सुस्पष्टम् । सर्वे मताचार्या अस्य व्याख्यां स्वस्वमतानुरोधेन रचयामासुः ।

इयं चोपनिषत् अथर्वशाखीयेति निर्दिष्टा । अत एव अस्याः अथर्वशाखायाः अथर्वशिर आद्युपनिषत्संबन्धो दृश्यते । अथर्वशिरसि प्रतिपादितस्य पाशुपताभिधस्य शिरोव्रतस्य अत्र निर्दिष्टत्वात् । तथा चोक्तं सूतसंहितायां—'व्रतं पाशुपतं चीर्णं यैर्द्विजैरादरेण तु । तेषामेवोपदिष्टव्यमिति वेदानुशासनम् ॥' इति । पाशुपतमतस्वरूपं तु क्रियासारे । तदुक्तं सूतसंहितायां—

'अथवाथर्वणैर्मन्त्रैर्गृहीत्वा भस्मपाण्डुरम् ।
सर्वाङ्गोद्धूलनं यत्तद्व्रतं प्रोक्तं मनीषिभिः ॥
एतद्वेदशिरोनिष्ठाः प्राहुः पाशुपतं मुने ।
केचित् 'शिरोव्रतं' प्राहुः केचिदत्याश्रमं बुधाः ॥
(क्रियासारे ३. २७. पृ. १८३.)
लिङ्गाङ्गसङ्गिनां वत्स पुनर्जन्म न विद्यते ।
एष पाशुपताचारः पशुपाशनिवृत्तये ॥
सर्ववेदान्तसारोऽयमत्याश्रम इति श्रुतिः ।
परब्रह्माभिधं लिङ्गं पशुपाशविमोचकम् ॥
यो धारयति सद्भक्त्या स पाशुपत उच्यते ।
शरीरत्रितये भक्त्या लिङ्गं पराशिवात्मकम् ॥
यो धृत्वा विचरेद्भूमौ स पाशुपत उच्यते ।
लिंगं शिवो भवेत्क्षेत्रमंगं संयोग आश्रयः ॥
तस्माल्लिङ्गांगसंयुक्तो योऽपि सोऽत्याश्रमी भवेत् ।
ब्रह्मचारी गृहस्थो वा वानप्रस्थो यतिस्तु वा ॥
यस्तु लिंगांगसंयुक्तः स एवात्याश्रमी भवेत् ॥

इत्यादिस्थलिंगस्कान्दपुराणादिवाक्येषु पाशुपतात्याश्रमव्रतयोः लिंगधारणपर्यायत्वेन निर्देशात् । पूर्वोक्तसूतसंहितावाक्येन शिरोव्रतस्य पाशुपतव्रतपर्यायत्वेन निर्दिष्टत्वाच्च । 'यावज्जीवंनियमेनानुष्ठेय लिंगधारणमहाव्रतमेव शिरोव्रतमिति बाढं जानीम' इति भाष्यकारैः (P. 180–186) सम्यक् प्रतिपाद्य पराभिमतं शिरस्यग्निधारणाग्निपात्रधार-

ऽङ्गारपात्रधारणरूपं शिरोव्रतं पूर्वोक्तानेकोपबृंहणवाक्यविरोधात् उपबृंहणानुसारेणैव श्रुत्यर्थस्य वक्तव्यत्वात्।' इत्यादिना निराकृतं सहृदयैराकलनीयम्।

किं च 'नायमात्मा बलहीनेन लभ्यो न च प्रमादात् तपसो वाप्यलिंगात्' इत्यत्रापि 'बलहीनेने' त्यस्य बलशब्दस्य शिवशक्तिपर्यायत्वेन व्याख्याय, तद्रहितेन चिच्छक्तिसंकोचचित्तशक्तिविशिष्टेन पुरुषेणेत्युक्त्वा, 'अलिंगाद्वा' इत्यस्य अविद्यमानं लिंगं यस्य सोऽलिङ्गस्तस्मादलिङ्गिनोऽवीरशैवात् न लभ्यः; किन्तु लिंगिनो वीरशैवाल्लभ्यः' इत्यादिना भाष्यस्य हृदयं अर्थस्वारस्यं च सप्रमाणं स्थापितं भाष्यकारैः। समर्थितं चैवमेव नीलकण्ठशिवाचार्यैरपि 'जगतः कारणं ब्रह्म चोपास्यं हि मुमुक्षुभिः। नायमात्मेति वाक्येन शिवस्य वरणं तनोः॥ वरणं नाम तद्रूपधारणं विधिमार्गतः॥' (क्रियासारः, १. १. १७९) भाष्यप्रारम्भे च, 'शौनको ह वै महाशालोऽङ्गिरसं विधिवदुपपन्नः पप्रच्छ' इत्यत्र अङ्गिराः शिरोव्रती वीरशैव एवासीदिति सप्रमाणं निरूपितम्। उदाहृतं च— 'अगस्त्यो जैमिनिश्चैव विश्वामित्रोऽथ काश्यपः। भरद्वाजोऽङ्गिरा अत्रिर्वसिष्ठो रोमहर्षणः॥ एते सर्वे महाभागा अतिवर्णाश्रमे रताः। वीरशैवा समाख्याता जीवन्मुक्ता न संशयः॥' नीलकण्ठशिवाचार्योक्तिवशेन (क्रियासारे)। अन्यच्च अस्यां चोपनिषदि 'तद्विज्ञानार्थं

स गुरुमेवाभिगच्छेत् समित्पाणिः श्रोत्रियं ब्रह्मनिष्ठम्' इति मन्त्रव्याख्यानावसरेऽपि इतरेषां भाष्यकाराणां आशयानुसारेण विरक्तानां (सन्यासिनां) तत्रापि ब्राह्मणानामेव विशेषतः ब्रह्मविद्याधिकारः इत्यादिकं सयुक्तिकं निराकृत्य गृहस्थानामपि अनासक्तियोगिनां न केवलं जात्या ब्राह्मणानां किं तु अत्याश्रमव्रतस्थानां सर्वेषां अधिकारिणां अपि च स्त्रीणामपि ब्रह्मविद्याधिकारः वर्तत इति सप्रमाणं प्रतिपादितं अस्मिन् भाष्ये ।

## परापरविद्याविभागः

भाष्येऽस्मिन् परापरविद्यास्वरूपं इतरभाष्यकारविलक्षणत्वेन स्वरसतया च प्रतिपादितम् । तदुक्तमागमे 'पञ्चाक्षरी परा विद्या शिवज्योतिरवाप्तये' इति । अनुभवसूत्रेऽपि 'पञ्चाक्षरीमिमां विद्यां प्रणवेन षडक्षरीम् । जपेत्समाहितो भूत्वा शिवपूजापरायणः ॥ पञ्चाक्षरीं परां विद्यां' इति । उक्तं च रेणुकभगवत्पादाचार्यैरपि 'मूलं विद्या शिवः शैवं सूत्रं पञ्चाक्षरस्तथा । एतानि नामधेयानि कीर्तितानि महामनोः ॥' इत्यादिभिः मूलप्रणवसहित महामनोः परविद्यात्वं साधयित्वा सिद्धान्तशिखोपनिषत्प्रमाणसम्मत्या 'पञ्चाक्षरमयं शम्भुं परब्रह्मस्वरूपिणम् । नकारादि यकारान्तं ज्ञात्वा पञ्चाक्षरीं जपे' दित्यादिप्रमाणप्रदर्शनेन

वाच्यवाचकस्वरूपस्य मन्त्रमयस्य शिवस्य चाभेदं निरूप्य सिद्धान्तितम् । सिद्धान्तशिखोपनिषद्यपि,— 'योऽयं नकारः सोऽयमकारः सद्योजातोऽभूद् ऋग्वेदः सम्पुट-मुच्यते ।' इत्यादिना मूलप्रणवघटकानां नकारादीनां तद्वाच्यानां सद्योजातादीनां तज्जन्यानां ऋग्वेदादीनां कामिकाद्यागमान्तानां च भेदः श्रूयते । तथा च सूक्ष्मस्थूलात्मक-प्रणवसहित पञ्चाक्षरीविद्यायाः कारणत्वावगमात् । षडङ्ग-सहित ऋग्वेदादि चतुष्टयस्य कार्यत्वावगमात् । सद्योजाता-द्यपरपर्यायाचारादिलिङ्गानां तदभिन्न-तद्वाचक-नकारादि-यकारान्त पञ्चाक्षरी विद्या कारणरूपा परा । तज्जन्यषडंग-ऋग्वेदाद्यात्मिका विद्या कार्यरूपा अपरा' चेति शङ्का-समाधानपूर्वकं प्रतिपाद्य, इतर भाष्यकाराभिमतं च सोपपत्तिकं निराकृतं च । (पृ. २७-३४) प्रतिपादितं चैवं शिवतत्त्वरत्नाकरे पञ्चमतरङ्गेऽपि—

'ओंकार एव लिंगं स्यात्सर्वकारणकारणम् ।
ओमिति ब्रह्मपरमं लिंगाकारं महेश्वरम् ॥

सृष्ट्यर्थं सर्वतत्त्वानां लोकस्योत्पत्तिकारणम् ।
शक्तिसंयोगसद्भावं स्वेच्छयाऽचिन्तयच्छिवः ॥

परापरविभागेन प्रणवस्तु द्विधा मतः ।
परः परतरं ब्रह्म प्रज्ञाऽऽनन्दादिलक्षणम् ॥

प्रकर्षेण नवं यस्मात् परं ब्रह्म स्वभावतः ।
अपरः प्रणवस्साक्षात् शब्दरूपस्तु निर्मलः ॥ '

इत्यारभ्य,

ओंकारप्रभवं सर्वं त्रैलोक्यं सचराचरम् ।
प्रणवो हि परं ब्रह्म प्रणवः परमं पदम् ॥

इति परमेश्वरस्य प्रणवांगकत्वं प्रतिपाद्य,

पंचब्रह्माणि पंचैव कृत्यानि सह कारणैः ।
बोध्यानि पंचभिर्वर्णैः पंचाक्षरमहामनोः ॥
पञ्चधा पंच धामानि प्रसिद्धानि विशेषतः ।
तानि सर्वाणि वस्तूनि पञ्चाक्षरमयानि हि ॥
इति पंचाक्षरीमन्त्रहेतुता प्रणवस्य तु ॥ '

इत्यादिना प्रणवसहितपञ्चाक्षरीमहामनोः परविद्यास्वरूपत्वं तज्जन्य ऋग्वेदादीनां अपरविद्यात्वं च सविस्तरं निरूपितम् । इत्यादि विशेषैश्च भाष्यमिदं सरलसुंदरभाषावैभवेन शास्त्र-प्रक्रियापरिमळितं राराजते । सहृदयाः सावधानमवलोक्य मोदेरन्नित्याशास्महे ।

# भाष्यकर्तॄणां परिचयः

---

सुगृहीतनामधेयाः कै ॥ शङ्करशास्त्रिमहोदयाः कर्णाटा-न्तर्भूत धारवाड जिल्हा उमचिगी ग्रामे क्रि. श. एकोनविंशतिशतकान्त्यभागे समभवन् । एते च महाभागाः साहित्य व्याकरण न्याय पूर्वोत्तरमीमांसादिशास्त्रेषु पारंगता भूत्वा प्रथमतः प्रातःस्मरणीयानां शिवयोगमहामन्दिरसंस्थापकानां लिं ॥ श्रीमन्निरञ्जनप्रणवस्वरूपिणां श्री श्री कुमारमहास्वामिनां आश्रयमुपलभ्य तत्र ग्रन्थसंशोधका आसन्निस्यनुश्रूयते । हैदराबाद् प्रान्ते परळीपवित्रतीर्थक्षेत्रे लोकप्रसिद्धस्य ज्योतिर्लिङ्गस्वरूपस्य वैद्यनाथेश्वरस्य पूजाधिकारविषये (१९१८-२०) समुपजात ब्राह्मण-वीरशैव विवाद-प्रसङ्गे आहूतेषु पण्डितप्रवरेषु प्रधानस्थानभाजः अभूवन्निति विज्ञायते ।

तत इमे पण्डितप्रकाण्डाः श्रीमदुज्जयिनी धर्मसिंहासनाध्यक्षाणां श्रीमज्जगद्गुरु श्री १००८ सिद्धलिङ्ग शिवाचार्यभगवत्पादानां आस्थानमलंकृत्य धर्मरत्नपदवीमलंकृत्य अनेकान् ग्रन्थान् व्यरचयन् । एतेषां 'ईशावास्योपनिषत् शांकरीव्याख्या' तावत् १९२० तमे वर्षे प्रकाशिता ।

'केनोपनिषत्' शांकरीव्याख्या तु १९२३ तमे च संवत्सरे प्रकटिता । ततश्च 'सिद्धान्तसुधाकरो' नाम वादग्रन्थः प्रकाशितः । 'सिद्धान्तशिखोपनिषत् वीरशैवभाष्यं' पुनः १९२७ तमे क्रिस्ताब्दे संमुद्रितम् । बहुग्रन्थरचना निश्चित-विदग्धमतीनां कृतहस्तानामेतेषामिदं 'मुण्डकोपनिषत् शक्तिविशिष्टाद्वैतभाष्य' मिदानीं प्रकटितं सत् विद्वद्वर्याणां सहृदयानां संस्कृतिप्रियाणां हस्तमलंकुर्यादित्यस्माकमतीव मोदावहमित्यावेद्यते । एतेषां महोदयानां अन्तिमदिनेष्वा-रब्धा 'श्रीकरभाष्यवृत्तिः' समाजदौर्भाग्यादसमाप्ताप्यनुप-लब्धा चेत्यावेदयितुमस्माकं खिद्यते मनः । इदं च मुण्डक-भाष्यं मैसूरुराज्यमध्यवर्तिन्याः देवनगर्याः (Davanagere) वास्तव्यानां वणिग्वर्याणां श्रीमतां एम्. चन्द्रशेखरप्प महो-दयानामन्तिके वरीवर्तीति उदन्तमुपलभ्य वारंवारं तत्र गत्वा प्रकटनाय त्वरमाणे मय्येव तद्दारं न्यस्तवतामेतेषां संस्मरणमस्माकमनिवार्यम् । किञ्चास्य ग्रन्थस्य संशोधने प्रकटने सम्मुद्रणे च उपकृतवतां सर्वेषां पण्डितानां उदार-चरितानां, ग्रन्थरत्नमिदं कर्णाटावनिजनावनरत्नप्रायाणां संस्कृतिसंरक्षकाणां वेदशास्त्रपुराणादि महाग्रन्थप्रकटनकाम-

द्वहां महीशूरमहासंस्थानराज्यपालानां श्रीमज्जयचामराज ओडेयर् बहादुर् महाप्रभुवर्याणां सन्निधौ समर्पणाय कृपया-अनुमतिं वितीर्णानां च कृतज्ञतापूर्वकाननन्तान् सप्रश्रय धन्यवादान् विनिवेद्य विरम्यत इति शम्.

सहृदयविधेयः,

म. गम्. नञ्जुण्डाराध्यः,

श्रीमन्महाराज संस्कृतमहापाठशाला

वीरशैवागम प्राध्यापकः.

शार्वरी शारदी

उत्थानद्वादशी.

सोमवासरे, मैसूर्.

३१-१०-१९६०.

# ಕೃತಜ್ಞತೆ.

ಆಸ್ಥಾನ ವಿದ್ವಾನ್ ಧರ್ಮರತ್ನ ವೇ|| ಲಿಂ|| ಉಮಚಿಗಿ ಶಂಕರಶಾಸ್ತ್ರಿ ವಿರಚಿತ ಮುಂಡಕೋಪನಿಷತ್ (ಶಕ್ತಿವಿಶಿಷ್ಟಾದ್ವೈತಪರ) ಭಾಷ್ಯ ಪ್ರಕಾಶನಕ್ಕಾಗಿ ಕೊಪ್ಪಳ ಗವಿಮಠಾಧ್ಯಕ್ಷರಾದ ಶ್ರೀ|| ನಿ|| ಪ್ರ|| ಗವಿ ಸಿದ್ಧೇಶ್ವರ ಮಹಾಸ್ವಾಮಿಗಳವರು ಒಂದು ನೂರು ರೂಪಾಯಿಗಳನ್ನಿತ್ತು ಆಶೀರ್ವದಿಸಿರುತ್ತಾರೆ. ಮತ್ತು ವೀರಶೈವ ಧರ್ಮಾಭಿಮಾನಿಗಳೂ ಹಿರಿಯರೂ ಆದ ದಿವಾನ್‌ಬಹದ್ದೂರ್ ರಾಜಧರ್ಮಪ್ರವೀಣ ಶ್ರೀಮಾನ್ ಪಿ. ಮಹದೇವಯ್ಯ, ರಿಟೈರ್ಡ್ ಚೀಫ್ ಜಸ್ಟೀಸ್ ಇವರು ಧರ್ಮಪ್ರವರ್ತ ರಾ|| ಬ|| ಲಿಂ|| ಗುಬ್ಬಿ ತೋಟದಪ್ಪನವರ ಧರ್ಮನಿಧಿಯಿಂದ ಇನ್ನೂರೈವತ್ತು ರೂಪಾಯಿಗಳನ್ನು ನೀಡಿರುತ್ತಾರೆ. ಮಠಾಧಿಪತಿಗಳಿಗೆ ಮತ್ತು ಸಾಮಾಜಿಕರಿಗೆ ಮಾದರಿಯಾದ ಗ್ರಂಥ ಪ್ರಕಾಶನ ಪ್ರೋತ್ಸಾಹಕರಾದ ಈರ್ವರು ಮಹನೀಯರಿಗೆ ಕೃತಜ್ಞತಾ ಪೂರ್ವಕವಾದ ಅನಂತ ವಂದನೆಗಳು.

ಪ್ರಕಾಶಕ.

# संज्ञावर्णसूची

| | | | |
|---|---|---|---|
| अ. शि. | अथर्वशिखा. | प्र. सू. | प्रत्यभिज्ञा सूत्रम्. |
| अ. शिरः. | अथर्वशिरः. | पु. सू. | पुरुषसूक्तम्. |
| ऋ. | ऋग्वेदः. | बृ. | बृहदारण्यकम्. |
| ऐत. | ऐतरेयम्. | ब्र. सू. | ब्रह्मसूत्रम्. |
| क. | कठः. | बृ. जा. | बृहज्जाबालम्. |
| कै. | कैवल्यम्. | म. | महोपनिषत्. |
| चं | चन्द्रालोकः | म. ना. | महानारायणी. |
| छां | छान्दोग्यं. | मां | माण्डूक्यम्. |
| त्रि. | त्रिपुरतापिनी. | मुं. | मुण्डकम्. |
| तै. आ. | तैत्तिरीय आनन्दवल्ली. | यो. | योगशिखा. |
| तै. भृ. | ,, भृगुवल्ली. | यो. सू. | योगसूत्रोपनिषत्. |
| तै. शि. | ,, शिक्षावल्ली. | रा. ता. | रामोत्तरतापिनी. |
| ना. | नारायणोपनिषत्. | ल. सू. | लघुसूत्रवृत्तिः. |
| नि. | निरुक्तम्. | श. सू. | शक्तिसूत्रम्. |
| नृ.पू.ता. | नृसिंहपूर्वतापिनी. | शि. सू. | शिवसूत्रम्. |
| पं. | पंचब्रह्मोपनिषत्. | श्वे. | श्वेताश्वतरः. |
| पा. सू. | पाणिनिसूत्रम्. | सा.रु.सू. | सामरुद्रसूक्तम्. |
| पं. जा. | पंचाक्षर जाबालम् । | | |

---

# विषयानुक्रमणिका

## प्राणलिङ्गिस्थलम्

### तृतीयमुण्डके प्रथमः खण्डः



## शरणस्थलम्



### द्वितीयः खण्डः



## ऐक्यस्थलम्



---

## ಅಥರ್ವಣಶಾಖೀಯ

# ಮುಂಡಕೋಪನಿಷತ್

## (ಶಕ್ತಿವಿಶಿಷ್ಟಾದ್ವೈತ ಪರಭಾಷ್ಯಮ್)

### ಅಥರ್ವಣವೇದ ಶೌನಕ ಶಾಖೆಗೆ ಸೇರಿದ

# ಮುಂಡಕೋಪನಿಷತ್ ವೀರಶೈವ ಭಾಷ್ಯದ

## ಭಾ ವ ದ ರ್ಪ ಣ

ಪರತತ್ತ್ವಾಂಬುಧಿಚಂದ್ರಂ
ಪರತರ ಶ್ರೀಪಂಡಿತಾರ್ಯ ಕರಸಂಜಾತಂ ।
ವಿರುಪಾಕ್ಷಾಭಿಧ ದೇಶಿಕ
ಗುರುವರನೆಮಗೀಯಲಿಷ್ಟಸಿದ್ಧಿಯನನಿಶಂ ॥

ಶ್ರುತಿಶಿರಮುಂಡಕಭಾಷ್ಯಕೆ
ಕೃತಿಸಿದಪಂ ಭಾವದರ್ಪಣವ ಕನ್ನಡವೊಳ್ ।
ಮತಿಯುತ ನಂಜುಂಡಾರ್ಯಂ
ಸುತಶ್ರೀಜಯಚಾಮರಾಜನಾಸ್ಥಾನಬುಧಂ ॥

ಅಂಭೋಜಾಸನಕೇಶವಾದಿವಿನುತಂ ಕುಂಭೋದ್ಭವಾದಿಸ್ತುತಮ್
ಸಾಂಬಂ ಭಕ್ತಜನೌಘಭೀಷಣಮಲಸ್ತಂಬೇರಮೋದ್ಯದ್ಧರಿಮ್ ।
ಅಂಭೋರೂಪಮಘಾಗ್ನಿದಾಹಶಮನೇ ಸಂಬೋಧಸಂಪತ್ಪ್ರದಮ್
ಶಂಭುಂ ಷಟ್‌ಸ್ಥಲರೂಪಿಣಂ ಭವಗಿರೇರ್ದಂಭೋಲಿಕಲ್ಪಂ ಭಜೇ ॥ ೧ ॥

ಶಿಷ್ಟಾಚಾರವನ್ನನುಸರಿಸಿ ಭಾಷ್ಯಕಾರರು ಗ್ರಂಥಾದಿಯಲ್ಲಿ ಇಷ್ಟ ದೈವಸ್ತುತಿ ಗುರುವಂದನೆ ಮತ್ತು ಪಿತೃಪ್ರಣಾಮಗಳನ್ನು ಮಾಡಿ; ತಮ್ಮ ಭಾಷ್ಯರಚನೆಯ ಸತ್ಸಂಕಲ್ಪವನ್ನು ನಿವೇದಿಸುತ್ತಿದ್ದಾರೆ.

ವೀರಶೈವ ಸಿದ್ಧಾಂತಕ್ಕೆ ಅನುಸಾರವಾಗಿ ಪರಮಾತ್ಮನ ಸಗುಣ-ನಿರ್ಗುಣೋಪಾಸನೆಯ ರೂಪವಾದ ಸ್ತುತಿಯಿದು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ, ಅಗಸ್ತ್ಯಾದಿ ಮಹರ್ಷಿಗಳೂ ಯಾರನ್ನು ಭಕ್ತಿಯಿಂದ ಭಜಿಸುತ್ತಿರುವರೊ ಅಂಥ ಷಟ್‌ಸ್ಥಲ ಸ್ವರೂಪಿಯಾದ ಪರಮೇಶ್ವರನು, ಭಕ್ತರಲ್ಲಿ ಬೇರೂರಿರುವ ಆಣವ-ಕಾರ್ಮಿಕ-ಮಾಯಾಮಲವೆಂಬ ಮದ್ದಾನೆಗೆ

ಸಿಂಹದಂತೆಯೂ, ಪಾಪವೆಂಬ ಕಾಡ್ಗಿಚ್ಚನ್ನು ಅಡಗಿಸುವ ಜಲದಂತೆಯೂ, ಸಂಸಾರಪರ್ವತಕ್ಕೆ ವಜ್ರಾಯುಧವೂ ಆಗಿ ಸುಜ್ಞಾನ ಸಂಪತ್ತನ್ನು ನೀಡುವವನಾಗಿದ್ದಾನೆ. ಆದುದರಿಂದ ಮಂಗಲಕರನೂ ಉಮಾಧವನೂ ಆದ ಆ ಪರಮೇಶ್ವರನನ್ನು ಭಕ್ತಿಯಿಂದ ಭಜಿಸುತ್ತೇನೆ.

ಶ್ರೀಪಾಲಾದ್ಯಮರರ್ಷಿಸನ್ನುತಪದಂ ಪಾಪಾಟವೀಪಾವಕಮ್
ಭೂಪಾಲೋತ್ತಮಪೂಜಿತಾಂಘ್ರಿಕಮಲಂ ತಾಪಾದ್ರಿವಜ್ರಾಯುಧಮ್ ।
ಶಾಪಾನುಗ್ರಹಶಕ್ತಿಯುಕ್ತವಿಭವಂ ಶ್ರೀಪಾರ್ವತೀಶಪ್ರಿಯಮ್
ಮಾಂ ಪಾಯಾದ್ಗುರುಪಂಚಕಂ ಶಿವಕರಂ ಸಾಂಬಾಸ್ಯಪದ್ಮೋದ್ಭವಮ್ ॥ ೨ ॥

ಶಿವಾಗಮೋಕ್ತರಾದ ಜಗದ್ಗುರು ಪಂಚಾಚಾರ್ಯರ ಸ್ವರೂಪ ವರ್ಣನೆ ಯಿದು. ಪರಮೇಶ್ವರನ ಸದ್ಯೋಜಾತ–ವಾಮದೇವ–ಅಘೋರ–ತತ್ಪುರುಷ-ಈಶಾನ್ಯ ಎಂಬ ಐದು ಮುಖಕಮಲಗಳಿಂದ ಕ್ರಮವಾಗಿ ರೇಣುಕ–ದಾರುಕ–ಘಂಟಾಕರ್ಣ- ಧೇನುಕರ್ಣ–ವಿಶ್ವಕರ್ಣ ಎಂಬ ಹೆಸರುಗಳಿಂದ ಅವತರಿಸಿರುವ ಮಂಗಲಪ್ರದರಾದ ಪಂಚ ಆಚಾರ್ಯರು ವಿಷ್ಣು ಮೊದಲಾದ ದೇವತೆಗಳಿಂದಲೂ, ಅಗಸ್ತ್ಯಾದಿ ಮಹರ್ಷಿಗಳಿಂದಲೂ ವಿಭೀಷಣ ವಿಕ್ರಮಾದಿತ್ಯಾದಿ ಸಾರ್ವಭೌಮರಿಂದಲೂ ಪೂಜಿಸಲ್ಪಟ್ಟ ಪಾದವುಳ್ಳವರು. ಪಾಪಾರಣ್ಯಕ್ಕೆ ಅಗ್ನಿಯಂತೆಯೂ, ಆಧ್ಯಾತ್ಮಿಕಾದಿ ತಾಪತ್ರಯವೆಂಬ ಪರ್ವತಕ್ಕೆ ವಜ್ರಾಯುಧದಂತೆಯೂ ಇದ್ದು ಗೋರಕ್ಷ, ಖರ್ಪರಾದಿಗಳನ್ನು ನಿಗ್ರಹಿಸಿ ಅನುಗ್ರಹಿಸಿದ ವೈಭವವುಳ್ಳವರೂ ಉಮಾರಮಣನ ಪ್ರೇಮ ಪಾತ್ರರೂ ಆಗಿದ್ದಾರೆ. ಇಂಥ ಪಂಚಾಚಾರ್ಯರು ನನ್ನನ್ನು ರಕ್ಷಿಸಲಿ.

ಶ್ರೀ ಸದ್ಧರ್ಮಪರಂ ಕೃತಂ ಜಗದಿದಂ ಯೇನೋಜ್ಜಯಿನ್ಯಾಂ ಪರಮ್
ಶ್ರೀ ಸದ್ಧರ್ಮ ಮೃಗೇಂದ್ರಪೀಠಮತುಲಂ ಸಂಸ್ಥಾಪಿತಂ ಪಾವನಮ್ ।
ಶ್ರೀ ಸಿದ್ಧೇಶ್ವರ ಲಿಂಗಗರ್ಭಜನುಷಂ ಸದ್ಭಕ್ತಸಂಪಜ್ಜುಷಮ್
ಶ್ರೀ ಸಿದ್ಧೇಂದ್ರ ವಿನುತ್ಯಪಾದಕಮಲಂ ತಂ ದಾರುಕಾರ್ಯಂ ಭಜೇ ॥ ೩ ॥

"ಆಚಾರ್ಯದೇವೋಭವ" ಎಂಬ ಶ್ರುತಿಯನ್ನನುಸರಿಸಿ ಗ್ರಂಥಕಾರರು ಮೂರು ಶ್ಲೋಕಗಳಿಂದ ತಮ್ಮ ಶಾಖಾ ಗುರುಪರಂಪರೆಯನ್ನು ಭಜಿಸುತ್ತಾರೆ. ಯಾವ ಆಚಾರ್ಯರು ಪಶುಧರ್ಮಮಯವಾದ ಈ

ಜಗತ್ತನ್ನು ಶಿವಾರ್ಚನಾದಿ ಪತಿಧರ್ಮದಲ್ಲಿ ತೊಡಗುವಂತೆಮಾಡಿ, ಧರ್ಮ ಸಂಸ್ಥಾಪನೆಗಾಗಿ ಉಜ್ಜಯನೀ ಪುಣ್ಯಕ್ಷೇತ್ರದಲ್ಲಿ ಸದ್ಧರ್ಮ ಸಿಂಹಾಸನವನ್ನು ಸ್ಥಾಪಿಸಿದರೊ, ಅಂಥ ಶ್ರೀ ಸಿದ್ಧೇಶ್ವರ ಲಿಂಗದಿಂದ ಅವತರಿಸಿದವರೂ, ಸದ್ಭಕ್ತಸಂಪತ್ ಶಾಲಿಗಳೂ, ಯೋಗಸಿದ್ಧರಿಂದ ಪೂಜಿತರೂ ಆದ ಜಗದ್ಗುರು ದಾರುಕಾಚಾರ್ಯರನ್ನು ಭಜಿಸುತ್ತೇನೆ.

ಶ್ರೀಮದ್ದಾರುಕ ಪೀಠೇಶಂ ಸಿದ್ಧಲಿಂಗಂ ಜಗದ್ಗುರುಮ್ ।
ಶ್ರೀ ದಾರುಕಮಿತಿಜ್ಞಾತ್ವಾ ವಂದೇಽಹಂ ಕರುಣಾರ್ಣವಮ್ ॥ ೪ ॥

ಶ್ರೀ ಜಗದ್ಗುರು ದಾರುಕ ಪೀಠಾಧಿಪತಿಗಳೂ, ಕರುಣಾಸಮುದ್ರರೂ, ಮಹಾಮಹಿಮರೂ ಆದ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರನ್ನು ಸಾಕ್ಷಾತ್ ಶ್ರೀ ದಾರುಕಾಚಾಯರೇ ಎಂದು ಭಾವಿಸಿ ವಂದಿಸುತ್ತೇನೆ.

ಸಿದ್ಧಲಿಂಗಶಿವಾಚಾರ್ಯ ಕರಕಂಜಸಮುದ್ಭವಮ್ ।
ಸಿದ್ಧೇಶ್ವರಶಿವಾಚಾರ್ಯಂ ವಂದೇಽಹಂ ತಂ ಜಗದ್ಗುರುಮ್ ॥ ೫ ॥

ಪರಮ ಪೂಜ್ಯರಾದ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಕರ ಕಮಲೋದ್ಭವರಾದ ಶ್ರೀ ಸಿದ್ಧೇಶ್ವರ ಶಿವಾಚಾರ್ಯರನ್ನು ವಂದಿಸುತ್ತೇನೆ.

ಶ್ರದ್ಧಾಮೌರ್ವ್ಯಾನತಹೃದಯಕೋದಂಡಯುಕ್ತೇಶಯಜ್ಞ-
ಬಾಣಾಘಾತಾಹತ ಕಲುಷ ಹಿಂಸ್ರೋಚ್ಛ್ರಯಂ ತಾತಪಾದಮ್ ।
ಮಾಂ ಯಸ್ಯಾಶೀರ್ವಚನಮಕರೋಚ್ಛಂಕರಂ ಪ್ರಾಪ್ತವಿದ್ಯಮ್
ಅಯ್ಯಪ್ಪಾರ್ಯಂ ಶಿವನುತಿಪರಂ ಸಾದರಂ ತಂ ನಮಾಮಿ ॥ ೬ ॥

"ಪಿತೃದೇವೋಭವ" ಎಂಬ ವಚನವನ್ನು ಅನುಸರಿಸಿ ತಂದೆಯನ್ನು ಭಕ್ತಿಯಿಂದ ನಮಸ್ಕರಿಸುತ್ತಾರೆ. "ಅಯ್ಯಪ್ಪಾರ್ಯ" ಎಂಬುದು ತಂದೆಯ ಹೆಸರು. ಅವರು ತುಂಬಾ ಆಸ್ತಿಕರು. ತಪಸ್ಸು-ಕರ್ಮ-ಜಪ-ಧ್ಯಾನ-ಜ್ಞಾನ ಎಂಬ ಪಂಚಯಜ್ಞಗಳನ್ನು ಆಚರಿಸುತ್ತಿದ್ದುದರಿಂದ ಅವರ ಹೃದಯವು ವಿನಮ್ರವಾಗಿತ್ತು. ಆದುದರಿಂದ ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯ ಎಂಬ ಆರು ಶತ್ರುಗಳು ಅವರಲ್ಲಿ ಸುಳಿಯುತ್ತಿರಲಿಲ್ಲವೆಂಬುದನ್ನು—" ಅವರ ಶ್ರದ್ಧೆಯೆಂಬ ಶಿಂಜನಿಯಿಂದ ಹೃದಯ

ವೆಂಬ ಧನುಸ್ಸುಬಾಗಿಸಲ್ಪಟ್ಟು ಅದರಲ್ಲಿ ಮೇಲೆ ಹೇಳಿದ ಪಾಚಯಜ್ಞಗಳೆಂಬ ಬಾಣಗಳನ್ನು ಹೂಡಿ ಪಾಪವೆಂಬ ಕ್ರೂರಮೃಗಗಳನ್ನು ಕೊಲ್ಲಲಾಗಿತ್ತು" ಎಂದು ಹೇಳಿದ್ದಾರೆ. ಇಂಥ ತಂದೆಯವರ 'ವಿದ್ವಾನ್ ಭವ' ಎಂಬ ಯಾವ ಆಶೀರ್ವಾದವು ಸಾಹಿತ್ಯ-ತರ್ಕ-ಯೋಗ-ಸಾಂಖ್ಯ-ಮೀಮಾಂಸಾದಿ ಶಾಸ್ತ್ರಗಳಲ್ಲಿ ನನ್ನನ್ನು ಪಾರಂಗತನನ್ನಾಗಿ ಮಾಡಿತೋ ಅಂಥ ಪವಿತ್ರಾತ್ಮರಾದ ತಂದೆಯುವರನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ.

ವಿದ್ಯುದ್ದೀಪ್ತ ವಿಶಾಲಸೌಧವಿಲಸನ್ಮೈಸೂರುಸಂವಾಸಿನೋ
ಶ್ರೀಮದ್ರಾಮಕಥಾಭಿರಾಮಚರಿತಶ್ರೀಕೃಷ್ಣಪೃಥ್ವೀಪತೇಃ ।
ಆಸ್ಥಾನಂ ಸಮಲಂಕೃತೇನ ವಿದುಷಾ ವೇದಾಂತವಿದ್ಯಾಬ್ಧಿನಾ
ಶ್ರೀಮಚ್ಛಂಕರಶಾಸ್ತ್ರಿಣಾ ಶಿವಮುದೇ ವ್ಯಾಖ್ಯಾಯತೇ ಮುಂಡಕಮ್ ॥ ೭ ॥

ವಿದ್ಯುದ್ದೀಪಗಳಿಂದ ಸಮಲಂಕೃತವಾದ ವಿಶಾಲ ಸೌಧಗಳಿಂದ ವಿರಾಜಿಸುವ ಮೈಸೂರು ರಾಜಧಾನಿಯಲ್ಲಿ ವಾಸಮಾಡುವವರೂ, ಶ್ರೀರಾಮ ಚಂದ್ರನಂತೆ ನಿರ್ಮಲ ಚಾರಿತ್ರ್ಯವುಳ್ಳವರಾಗಿರುವ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಆಸ್ಥಾನವಿದ್ವಾಂಸರೂ ವೇದಾಂತ ವಿದ್ಯಾಸಾಗರರೂ ಆದ ಶ್ರೀ ಶಂಕರಶಾಸ್ತ್ರಿ ಎಂಬ ಈ ಭಾಷ್ಯಕಾರರು ಶಿವಪ್ರೀತ್ಯರ್ಥವಾಗಿ ಮುಂಡಕೋಪನಿಷತ್ತಿಗೆ ವೀರಶೈವ ಸಿದ್ಧಾಂತಪರವಾಗಿ ವ್ಯಾಖ್ಯಾನವನ್ನು ಬರೆಯುತ್ತಾ ತಮ್ಮ ಹೆಸರು ಲೋಕದಲ್ಲಿ ಆಚಂದ್ರಾರ್ಕವಾಗಿ ಶೋಭಿಸಲೆಂಬ ಉದ್ದೇಶದಿಂದ ಇಲ್ಲಿ ತಮ್ಮ ನಾಮನಿರ್ದೇಶ ಮಾಡಿರುತ್ತಾರೆ.

## ಶಾಂತಿ ಮಂತ್ರ

ಭದ್ರಂ ಕರ್ಣೇಭಿಶ್ಶೃಣುಯಾಮದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂ ಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ ॥

ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವೆ ದೇವಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋಽರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥ ಓಮ್ ಶಾಂತಿಃ ಶಾಂತಿಃ ಶಾಂತಿಃ.

## ವೀರಶೈವಭಾಷ್ಯದ ಭಾವದರ್ಪಣ

ದೇವಾಃ–ಕಣ್ಣು ಕಿವಿ ಮೊದಲಾದ ಇಂದ್ರಿಯಾಭಿಮಾನಿಗಳಾದ ಎಲ್ಲ ಸರ್ವದೇವತೆಗಳಿರಾ! ಕರ್ಣೇಭಿಃ–ನಮ್ಮ ಕಿವಿಗಳಿಂದ, ಭದ್ರಂ–ಸರ್ವಮಂಗಲಕ್ಕೂ ಆಸ್ಪದನಾದ ಪರಶಿವನ ಪಂಚಾಕ್ಷರ ಮಹಾಮಂತ್ರವನ್ನು ಶೃಣುಯಾಮ–ಕೇಳಲು ಸಮರ್ಥರಾಗೋಣ. ಅಕ್ಷಭಿಃ–ನೇತ್ರಗಳಿಂದ. ಭದ್ರಂ–ಇಷ್ಟಲಿಂಗರೂಪನಾದ ಸದಾಶಿವನನ್ನು, ಪಶ್ಯೇಮ–ನೋಡಲು ಸಮರ್ಥರಾಗೋಣ, ಸ್ಥಿರೈಃ–ನಿತ್ಯವಾದ, ಅಂಗೈಃ–ಸರ್ವಜ್ಞತ್ವಾದಿ ಷಡಂಗಗಳಿಂದ ಕೂಡಿರುವ, ಭದ್ರಂ–ಇಷ್ಟಲಿಂಗರೂಪನಾದ ಪರಶಿವನನ್ನು, ಯಜತ್ರಾಃ–ಧಾರಣಮಾಡಿಕೊಂಡಿರುವವರಾದ್ದರಿಂದ, ತುಷ್ಟುವಾಂಸಃ, ಶಿವಲಿಂಗ ಧಾರಣ, ಅರ್ಚನ, ಅರ್ಪಣರೂಪವಾದ ಅನುಭವದಿಂದ ಸಂತುಷ್ಟರಾಗಿ ಪರಿಪುಷ್ಟರಾದ ನಾವು, ದೇವಹಿತಂ–ಬ್ರಹ್ಮ ವಿಷ್ಣು ಮೊದಲಾದ ದೇವತೆಗಳಿಗೂ ಹಿತಕರನಾದ ಪರಶಿವನನ್ನು, ಯಾವದಾಯುಃ–ಆಯುಸ್ಸು ಇರುವವರೆಗೂ, ತನೂಭಿಃ–ಸ್ಥೂಲ ಸೂಕ್ಷ್ಮ ಕಾರಣರೂಪವಾದ ತ್ಯಾಗಾಂಗ, ಭೋಗಾಂಗ, ಯೋಗಾಂಗಗಳಿಂದ, ಇಷ್ಟಪ್ರಾಣಭಾವಲಿಂಗಗಳಲ್ಲಿ ಸಾಮರಸ್ಯಾಭ್ಯಾಸದಿಂದ ವ್ಯಶೇಮ–ಸಾಮರಸ್ಯವನ್ನು ಹೊಂದೋಣ.

ಕಣ್ಣು ಕಿವಿ ಮೊದಲಾದ ಇಂದ್ರಿಯಾಭಿಮಾನಿಗಳಾದ ದೇವತೆಗಳನ್ನು ಉದ್ದೇಶಿಸಿ ಹೇಳುವ ನೆಪದಿಂದ ಭಗವತೀ ಶ್ರುತಿಯು ಸಮಸ್ತ ಸದ್ಭಕ್ತ ವೃಂದವನ್ನು ಕುರಿತು ಹೀಗೆ ಅಪ್ಪಣೆಮಾಡುತ್ತದೆ–ಕಿವಿಗಳಿಂದ ಯಾವಾಗಲೂ

ಮಂಗಲಮಯವಾದ 'ಶಿವ' ಎಂದರೆ ಶಿವನಾಮ ಪರ್ಯಾಯವಾದ ಶಿವ ಪಂಚಾಕ್ಷರ ಮಹಾಮಂತ್ರವನ್ನು ಕೇಳುವ ಸಾಮರ್ಥ್ಯವು ನಮಗೆ ಉಂಟಾಗಲಿ. ಅರ್ಥಾತ್ ಶಿವಪಂಚಾಕ್ಷರೀ ಮಹಾಮಂತ್ರ ಶ್ರವಣಕ್ಕೆ ಪ್ರತಿಬಂಧಕವಾದ ಕಿವುಡುತನವು ನಮಗೆಂದಿಗೂ ಉಂಟಾಗದಿರಲೆಂದು ತಾತ್ಪರ್ಯ. ಸಿದ್ಧಾಂತ ಶಿಖಾಮಣಿಯಲ್ಲಿ ಶಿವಪಂಚಾಕ್ಷರ ಮಂತ್ರಕ್ಕೆ "ಮೂಲ, ವಿದ್ಯಾ, ಶಿವ, ಶೈವ ಸೂತ್ರ, ಪಂಚಾಕ್ಷರ ಎಂಬ ಪರ್ಯಾಯ ನಾಮಗಳಿವೆ"ಯೆಂದು ಹೇಳಿದೆ. (ಪರಿ, ೮-೨೩). ಅದರಂತೆ ಕಣ್ಣುಗಳಿಂದ ಭದ್ರಪದವಾಚ್ಯನೂ ಇಷ್ಟ ಲಿಂಗರೂಪನೂ ಆದ ಸದಾಶಿವನನ್ನು ನೋಡುವ ಸಾಮರ್ಥ್ಯವು ನಮಗೆ ಉಂಟಾಗಲಿ. ಅಂದರೆ ಪರಶಿವನನ್ನು ನೋಡುವ ವಿಷಯದಲ್ಲಿ ನಮಗೆಂದಿಗೂ ಅಂಧತ್ವವುಂಟಾಗದಿರಲಿ. ನಿರಂತರವೂ ವಿಶ್ವವನ್ನು ಶಿವಮಯವಾದ ದೃಷ್ಟಿಯಿಂದ ನೋಡುವ ಶಕ್ತಿಯನ್ನು ದಯಪಾಲಿಸುವಂತೆ ಪ್ರಾರ್ಥಿಸ ಲಾಗಿದೆ. "ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧತ್ವ, ಅಲುಪ್ತ ಶಕ್ತಿತ್ವ, ಅನಂತಶಕ್ತಿತ್ವ ಎಂಬ ಆರು ಅಂಗಗಳು ಪರಮಾತ್ಮನಿಗಿವೆ" ಎಂದು ಆಗಮವು ಹೇಳುತ್ತದೆ. ಈ ಅಂಗಗಳು ಸ್ಥಿರವಾದವುಗಳು. ಅನಿತ್ಯವಲ್ಲ. ಆದ್ದರಿಂದಲೇ ಪರಮಾತ್ಮನು "ಸ್ಥಿರೈಃ ಅಂಗೈಃ" ಸ್ಥಿರವಾದ ಅಂಗಗಳಿಂದ ಕೂಡಿರುವನೆಂದು ಹೇಳಿರುವುದು. ಋಗ್ವೇದದಲ್ಲಿ "ಸ್ಥಿರೇಭಿರಂಗೈಃ ಪುರು ರೂಪ ಉಗ್ರಃ"ಎಂದು ಇದನ್ನೇ ಸಮರ್ಥಿಸಿದೆ. ಇಂಥ ಪರಮಾತ್ಮನ ಪ್ರತೀಕ ವಾದ ಇಷ್ಟಲಿಂಗವು 'ಭದ್ರ'ವೆಂಬ ಪದದಿಂದ ಇಲ್ಲಿ ಉಕ್ತವಾಗಿದೆ. ಇಂಥ ಇಷ್ಟಲಿಂಗವನ್ನು ಧಾರಣಮಾಡಿಕೊಳ್ಳಬೇಕು ಎಂಬುದು 'ಯಜತ್ರಾಃ'ಎಂಬ ಪದದಿಂದ ಉಕ್ತವಾಗಿದೆ. 'ಯಜ–ದೇವಪೂಜಾಸಂಗತಿಕರಣದಾನೇಷು' ಎಂಬ ಧಾತುಪಾಠದಿಂದ ಯಜುಧಾತುವಿಗೆ 'ಸಂಗತಿಕರಣ' ಎಂದರೆ 'ಧಾರಣ ಮಾಡುವುದು' ಎಂಬ ಅರ್ಥವು ಸ್ವರಸವಾಗಿ ಅನ್ವಯವಾಗುತ್ತದೆ. ಆದುದರಿಂದ ಇಷ್ಟಲಿಂಗಧಾರಣ ಮಾಡಿಕೊಂಡಿರುವ ಭಕ್ತರು ಶಿವಲಿಂಗ ಧ್ಯಾನಧಾರಣ, ಅರ್ಚನ, ಅರ್ಪಣಾನುಭವ ಮೊದಲಾದವುಗಳಿಂದ ಸಂತುಷ್ಟ ರಾಗಿ ಆನಂದತುಂದಿಲರಾಗುತ್ತಾರೆ ಎಂಬುದನ್ನು 'ತುಷ್ಟುವಾಂಸಃ' ಎಂಬ ವಿಶೇಷಣವು ಸೂಚಿಸುತ್ತದೆ. ಹೀಗಿರುವ ಭಕ್ತರು ತಮ್ಮ ಆಯುಸ್ಸು ಇರುವವರೆಗೂ ಸ್ಥೂಲಸೂಕ್ಷ್ಮಕಾರಣ ಶರೀರಗಳೆನಿಸಿದ ತ್ರ್ಯಂಗಾಂಗ

ಭೋಗಾಂಗ ಯೋಗಾಂಗಗಳೊಡನೆ ದೇವಹಿತನೆನಿಸಿದ ಇಷ್ಟ-ಪ್ರಾಣ-ಭಾವಲಿಂಗರೂಪವಾದ ಪರಬ್ರಹ್ಮದಲ್ಲಿ ಅಷ್ಟಾವರಣಗಳಿಂದ ಕೂಡಿದ ಸಾಮರಸ್ಯಾಭ್ಯಾಸದಿಂದ ಪ್ರವೇಶಿಸಬೇಕು. ಅರ್ಥಾತ್ ನದಿಗಳು ನಾಮ ರೂಪಗಳಳಿದು ಸಮುದ್ರದಲ್ಲಿ ಅಡಗುವಂತೆ ಐಕ್ಯವಾಗಬೇಕು. 'ಶರೀರ ವೃತ್ತಿರ್ವ್ರತಂ' (ಶಿ. ಸೂ. ೩-೨೬) ಎಂಬ ಶಿವಸೂತ್ರವೂ ಸಹಶಿವಸಾಮ್ಯವನ್ನು ಪಡೆದ ಯೋಗಿಯು 'ಶಿವೋऽಹಂಭಾವ'ದಿಂದ ಶರೀರವಿರುವವರೆಗೆ ಐಕ್ಯಾನು ಸಂಧಾನ ಮಾಡಬೇಕೆಂದು ಹೇಳುತ್ತದೆ. 'ಕುರ್ವನ್ನೇವೇಹ ಕರ್ಮಾಣಿ' (ಈಶ. ೨) ಎಂಬ ಉಪನಿಷತ್ತಿನ ವಚನವೂ ಇದನ್ನೇ ಸಮರ್ಥಿಸಿದೆ. ಮೇಲೆ ಹೇಳಿದ ಸಾಮರಸ್ಯಾಭ್ಯಾಸಕ್ಕೆ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷ, ಮಂತ್ರ, ತೀರ್ಥ ಮತ್ತು ಪ್ರಸಾದ ಎಂಬ ಎಂಟು ಆವರಣಗಳು ಸಾಧನಗಳೆನಿಸಿವೆ. ಈ ಸಾಧನಾಭ್ಯಾಸದಿಂದ ಸ್ಥೂಲತನುವಾದ ತ್ಯಾಗಾಂಗವು ಇಷ್ಟಲಿಂಗದಲ್ಲಿಯೂ, ಸೂಕ್ಷ್ಮತನುವಾದ ಭೋಗಾಂಗವು ಪ್ರಾಣಲಿಂಗ ದಲ್ಲಿಯೂ ಕಾರಣತನುವೆನಿಸಿದ ಯೋಗಾಂಗವು ಭಾವಲಿಂಗದಲ್ಲಿಯೂ ಲಯವಾಗಿ ಅಂಗಪದವಾಚ್ಯನಾದ ಜೀವನು ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆಯುವಂತೆ ಪರಬ್ರಹ್ಮದಲ್ಲಿ ಲೀನನಾಗಿ ಐಕ್ಯನಾಗುತ್ತಾನೆ ಎಂಬುದನ್ನು 'ವ್ಯಶೇಮ' ಎಂಬ ಪದವು ಸ್ಪಷ್ಟಪಡಿಸಿದೆ.

ಇನ್ನು ಭಾಷ್ಯಕಾರರು ಈ ಶಾಂತಿಮಂತ್ರದಲ್ಲಿರುವ 'ಸ್ಥಿರೈಃ ಅಂಗೈಃ' ಎಂಬ ಪದಕ್ಕೆ ಕೆಲವರು 'ಉಪಾಸಕನ ಕರಚರಣಾದಿ ಅವಯವಗಳು' ಎಂದು ಹೇಳಿರುವ ಅರ್ಥವು ಸರಿಯಲ್ಲವೆಂದು ನಿರಾಕರಿಸಿದ್ದಾರೆ. ಏಕೆಂದರೆ 'ನಿತ್ಯ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವ 'ಸ್ಥಿರ' ಶಬ್ದವು ಉಪಾಸಕನ ಅನಿತ್ಯವಾದ ಕರಚರಣಾದಿ ಅವಯವಗಳಿಗೆ ಅನ್ವಯಿಸುವುದು ಹೇಗೆ? ಆದುದರಿಂದ ಈ 'ಸ್ಥಿರೈಃ ಅಂಗೈಃ' ಎಂಬ ವಿಶೇಷಣವನ್ನು ಸರ್ವಜ್ಞತ್ವ ಮೊದಲಾದ ಷಡಂಗವಿಶಿಷ್ಟನೂ ಉಪಾಸ್ಯನೂ ಆದ ಪರಮಾತ್ಮನ ಸ್ಥಿರವಾದ ಅಂಗಪರವಾಗಿ ವ್ಯಾಖ್ಯಾನ ಮಾಡಿರುವುದು ಬಹುಸಮಂಜಸ ವಾಗಿದೆ. ಇದಕ್ಕೆ 'ಸ್ಥಿರೇಭಿರಂಗೈಃ' ಎಂಬ ಋಗ್ವೇದೋಕ್ತಿಯು ಸಮರ್ಥನೆಯನ್ನು ತೋರಿಸಿರುವರು. ಎರಡನೆಯದಾಗಿ ಈ ಮಂತ್ರದಲ್ಲಿ

'ತನೂಭಿಃ' ಎಂಬ ಬಹುವಚನಾಂತವಾದ ಶಬ್ದಕ್ಕೆ "ಸ್ತ್ರಿಯಾಂ ಮೂರ್ತಿ ಸ್ತ್ರನುಸ್ತನೂಃ" ಎಂಬ ಕೋಶಪ್ರಮಾಣವನ್ನು ಉದಹರಿಸಿ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ತನುಗಳು ಎಂಬ ಪ್ರಸಿದ್ಧ ಅರ್ಥವೇ ಸ್ವರಸವಾಗಿ ಅನ್ವಯ ವಾಗುತ್ತಿರುವಾಗ ಈ ಶಬ್ದಕ್ಕೆ "ಶ್ರುತಿ" ಎಂಬ ಅಪ್ರಸಿದ್ಧವಾದ ಅರ್ಥವನ್ನು ಹೇಳುವ ಕೆಲವರ ವಾದವನ್ನು ಸಯುಕ್ತಿಕವಾಗಿ ನಿರಾಕರಿಸುತ್ತಾರೆ.

"ಸ್ವಸ್ತಿನ ಇಂದ್ರೋ" ಎಂಬ ಎರಡನೆಯ ಶಾಂತಿ ಮಂತ್ರವು ಮಂದಾಧಿಕಾರಿಗಳನ್ನೂ ಸಹ ಲಿಂಗಧಾರಣದಲ್ಲಿ ಪ್ರವೃತ್ತಿಗೊಳಿಸಲು ಬೇರೆ ರೀತಿಯಿಂದ ನಿರೂಪಿಸುತ್ತಿದೆ. ವೃದ್ಧಶ್ರವಾಃ-ಅಧಿಕ ಕೀರ್ತಿಶಾಲಿಯಾದ, ಇಂದ್ರಃ-ದೇವೇಂದ್ರನು, ನಃ-ನಮ್ಮ ವೇದ ಪುರುಷರಂತೆ, ಸ್ವಸ್ತಿ-ಶಾಂಭವ ಇಷ್ಟಲಿಂಗವನ್ನು, ದಧಾತು-ಧರಿಸಿರುವನು. ಹಾಗೆಯೇ ಪೂಷಾ-ಸೂರ್ಯನು ಮತ್ತು ವಿಶ್ವೇದೇವಾಃ-ವಿಶ್ವೇದೇವತೆಗಳೂ ಇಷ್ಟಲಿಂಗವನ್ನು ಧರಿಸಿರುವರು. ತಾರ್ಕ್ಷ್ಯಃ-ಗರುಡನೂ, ಅರಿಷ್ಟನೇಮಿಃ-ಶುಭಪ್ರದನಾದ ವಿಷ್ಣುವೂ, ಬೃಹಸ್ಪತಿಃ-ದೇವಗುರುವಾದ ಬೃಹಸ್ಪತಿಯೂ ಸ್ವಸ್ತಿದಧಾತು-ಇಷ್ಟಲಿಂಗವನ್ನು ಧರಿಸಿರುವರು. ಅಂದಮೇಲೆ ಮುಮುಕ್ಷುಗಳಾದ ಮಾನವರು ಇಷ್ಟಲಿಂಗ ಧಾರಣವನ್ನು ಅವಶ್ಯಮಾಡಿಕೊಳ್ಳಲೇಬೇಕೆಂಬುದು ಅರ್ಥಾತ್ ಸಿದ್ಧ ವಾಗುತ್ತದೆ.

ವೇದಪುರುಷರಿಗೆ ಇಷ್ಟಲಿಂಗಧಾರಣೆಯುಂಟೆಂಬ ವಿಷಯದಲ್ಲಿ ಭಾಷ್ಯ ಕಾರರು—

ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ॥
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮತ್ ।
ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರೀಹಿ (ಋ. ೮-೧.೨೫)

ಅಯಂ ಭಗವಾನ್-ಲಿಂಗರೂಪನಾದ ಈ ಸದಾಶಿವನು, ಮೇ ಹಸ್ತಃ-ನನ್ನ ಹಸ್ತವನ್ನು ಹೊಂದಿರುವನು. ಅಯಂ-ಈ ಶಿವಲಿಂಗಮೂರ್ತಿಯೇ, ಮೇ-ನನಗೆ, ಭಗವತ್ತರಃ-ಅತಿಶಯವಾದ ಐಶ್ವರ್ಯವನ್ನು ಕೊಡುವನು.

ಅಯಂ-ನನ್ನ ಹಸ್ತದಲ್ಲಿರುವ ಈ ಶಿವಲಿಂಗಮೂರ್ತಿಯು, ಮೇ-ನನಗೆ, ವಿಶ್ವಭೇಷಜಃ-ಸಮಸ್ತ ಭವರೋಗಗಳಿಗೆ ಮಹಾವೈದ್ಯನಾಗಿರುತ್ತಾನೆ. ಅಯಂ-ಈ ಶಿವಲಿಂಗಮೂರ್ತಿಯು, ಶಿವಾಭಿಮರ್ಶನಃ-ಕಲ್ಯಾಣವನ್ನುಂಟು ಮಾಡುವನು. ಅಯಂ-ಈ ಲಿಂಗಮೂರ್ತಿಯು, ಮಾತಾ-ತಾಯಿಯಂ ತೆಯೂ, ಪಿತಾ-ತಂದೆಯಂತೆಯೂ ರಕ್ಷಣಮಾಡುವನು. ಅಯಂ-ಈ ದೇವನು, ಜೀವಾತುಃ-ಸಂಜೀವಿನಿಯಂತೆ ಪ್ರಾಣರಕ್ಷಣಮಾಡುವನು. ಆಗಮಾತ್-ಶಾಸ್ತ್ರಪ್ರಮಾಣದಿಂದ, ಹೇ ಸುಬಂಧೋ-ಎಲೈ ಸಿರ್ವಾಜ್ಯ ಬಂಧುವೆ! ಏಹಿ-ಇಲ್ಲಿಗೆ ಆಗಮಿಸು. ಇದಂ-ನನ್ನ ಹಸ್ತದಲ್ಲಿರುವ ಶಿವ ಲಿಂಗವು ತವ-ನಿನಗೆ, ಪ್ರಸರ್ಪಣಂ-ವಿಹಾರಸ್ಥಾನವಾಗಿರುವುದು. ನಿರೀಹಿ-ಅತ್ತಿತ್ತ ಚಲಿಸದಂತೆ ಈ ಇಷ್ಟಲಿಂಗದಲ್ಲಿ ಯಾವಾಗಲೂ ನೆಲೆಸಿರು.

ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ ।
ತಯಾ ನಸ್ತನುವಾ ಶಂತಮಯಾ ಗಿರಿಶಂತಾಽಭಿಚಾಕಶೀಹಿ ॥

(ಶ್ರೀರುದ್ರ ಅನು. ೧)

ಹೇರುದ್ರ-ದುಃಖನಾಶಕನಾದ ಎಲೈ ಶಿವನೇ ತೇ-ನಿನ್ನ ಅಘೋರಾ-ಶಾಂತಾಕಾರವಾದ, ಶಿವಾ-ಮಂಗಲಸ್ವರೂಪವಾದ, ಯಾ ತನೂಃ-ಯಾವ ಲಿಂಗಶರೀರವು, ಅಪಾಪಕಾಶಿನೀ-ಅಪಾಪ-ಪಾಪರಹಿತರಾದ ಭಕ್ತರ ಶರೀರ ಗಳಲ್ಲಿ, ಕಾಶಿನೀ-ಪ್ರಕಾಶಿಸುತ್ತಿರುವುದೋ, ಶಂತಮಯಾ-ಸುಖಪ್ರದವಾದ, ತನು_ನಮ್ಮ ದೇಹದಲ್ಲಿ, ಅಭಿಚಾಕಶೀಹಿ-ಪ್ರಕಾಶಿಸುವನಾಗು ಎಂಬ ಮಂತ್ರಗಳನ್ನು ಉದಹರಿಸಿದ್ದಾರೆ. ಮತ್ತು "ಭದ್ರ" "ಸ್ವಸ್ತಿ" ಎಂಬ ಪದಗಳಿಗೆ "ಪರಶಿವಲಿಂಗ" ಎಂದು ತಾವು ಅರ್ಥಮಾಡಿರುವ ಮಂತ್ರಾರ್ಥವು ಸಮಂಜಸವಾಗಿರುವ ಅಂಶವನ್ನು ಲಿಂಗಪುರಾಣದ ಅದೇ ಮಂತ್ರಾರ್ಥವುಳ್ಳ ಉಪಬೃಂಹಣ ವಾಕ್ಯಗಳಿಂದ ಸಮರ್ಥಿಸಿರುವುದು ಮಹತ್ವವಾದ ಅಂಶವಾಗಿದೆ. "ಎಲೈ ಸುರಶ್ರೇಷ್ಠರೆ! 'ಭದ್ರಂ ಪರಶಿವಂ' ಭದ್ರಪದವಾಚ್ಯನಾದ ಪರಶಿವ ನನ್ನು ಭಕ್ತಿಯಿಂದ ಕೇಳೋಣ. 'ಭದ್ರಂ ನೇತ್ರೈಃ ಪ್ರಪಶ್ಯಾಮೋಲಿಗ ರೂಪಂ ಸದಾಶಿವಂ' ಭದ್ರಪದವಾಚ್ಯನೆನಿಸಿದ ಲಿಂಗರೂಪ ಸದಾಶಿವನನ್ನು ಕಣ್ಣುಗಳಿಂದ ಚನ್ನಾಗಿ ನೋಡೋಣ. 'ಭದ್ರಂ ಯಜಾಮಃ' ಎಂದರೆ ಶಿವಲಿಂಗಧಾರಣಮಾಡಿಕೊಂಡು 'ತುಷ್ಟುವಾಮೋ ಯಥಾವಿಧಿ' ವಿಧ್ಯುಕ್ತ

ವಾಗಿ ಸ್ತೋತ್ರಾದಿಗಳನ್ನು ಮಾಡೋಣ. 'ದೇವಹಿತಂ ಶಿವಂ' ದೇವಹಿತ ಕಾರಿಯಾದ ಪರಶಿವನನ್ನು ಆಯುಸ್ಸಿರುವವರೆಗೂ ತನುಗಳಿಂದ ಯಾವಾಗಲೂ 'ಭಕ್ತ್ಯಾಸ್ಥಾಪಯಾಮೋ ಯಥಾವಿಧಿ' ವಿಧ್ಯುಕ್ತವಾಗಿ ಧಾರಣ ಅರ್ಚನಾದಿಗಳನ್ನುಮಾಡಿಕೊಳ್ಳೋಣ. "ಸ್ವಸ್ತ್ಯಾಖ್ಯಂ ಶಾಂಭವಂ ಲಿಂಗಂ" 'ಸ್ವಸ್ತಿ' ಎಂಬ ಹೆಸರಿನ ಶಿವಲಿಂಗವನ್ನು ವೃದ್ಧಶ್ರವನಾದ ಇಂದ್ರನೇ ಮೊದಲಾದವರೆಲ್ಲರೂ ಧರಿಸಿರುತ್ತಾರೆ" ಎಂಬ ಅರ್ಥದ ಶ್ಲೋಕಗಳು ಭಾಷ್ಯದಲ್ಲಿ ಉದಾಹೃತವಾಗಿವೆ || ೧ ||

**ಅನುಬಂಧಚತುಷ್ಟಯ**--ಪ್ರಯೋಜನ, ವಿಷಯ, ಅಧಿಕಾರಿ ಮತ್ತು ಸಂಬಂಧ ಎಂಬವುಗಳು ಗ್ರಂಥವನ್ನು ಅಭ್ಯಾಸಮಾಡುವವರಿಗೆ ಪ್ರವೃತ್ತಿಯನ್ನು ಉಂಟುಮಾಡುವುದಕ್ಕಾಗಿ ನಿರೂಪಿತವಾಗಿವೆ. ಇವುಗಳನ್ನು ತೋರಿಸದಿದ್ದಲ್ಲಿ ಇದನ್ನು ಅಧ್ಯಯನಮಾಡುವವರಿಗೆ ಈ ಗ್ರಂಥಾಭ್ಯಾಸದಲ್ಲಿ ಪ್ರವೃತ್ತಿಯೇ ಉಂಟಾಗುವುದಿಲ್ಲವಾದ್ದರಿಂದ ಈ ಶ್ರುತಿಯಲ್ಲಿ "ಯಥಾನದ್ಯಃ" (೩-೨-೮) "ಬ್ರಹ್ಮವೇದ ಬ್ರಹ್ಮೈವ ಭವತಿ, ಗುಹಾಗ್ರಂಥಿಭ್ಯೋ ವಿಮುಕ್ತೋ ಭವತಿ" (೩-೨-೯) ಎಂಬ ಮಂತ್ರಗಳಿಂದ ಪ್ರಯೋಜನವು ಉಕ್ತವಾಗಿದೆ. "ಯತ್ತದದ್ರೇಶ್ಯಂ" (೧-೧-೬) ಮುಂತಾದ ಮಂತ್ರಗಳಿಂದ ಶಕ್ತಿವಿಶಿಷ್ಟಾದ್ವೈತರೂಪವಾದ ಪರಶಿವಬ್ರಹ್ಮವೇ ವಿಷಯವೆನಿಸಿದೆ. ಶಿರೋವ್ರತರೂಪಲಿಂಗಧಾರಣ ಮಹಾವ್ರತಾತ್ಮಕವಾದ ಶಿವದೀಕ್ಷಾಸಂಪನ್ನನೆ ಈ ಬ್ರಹ್ಮವಿದ್ಯೆಗೆ ಅಧಿಕಾರಿಯೆಂಬುದನ್ನು 'ತೇಷಾಮೇವೈತಾಂ' (೩-೨-೧೦) ಎಂಬ ಮಂತ್ರವು ಸ್ಪಷ್ಟಪಡಿಸಿದೆ. ಶಾಸ್ತ್ರ ಮತ್ತು ವಿಷಯಗಳಿಗೆ ಇರುವ ಪ್ರತಿಪಾದ್ಯಪ್ರತಿಪಾದಕ ಭಾವವೇ ಸಂಬಂಧ.

ಇದಲ್ಲದೆ ಉಪನಿಷತ್ತಿನ ಪ್ರಾರಂಭದಲ್ಲಿ ಬ್ರಹ್ಮ, ಅಥರ್ವ, ಅಂಗಿರ, ಭಾರದ್ವಾಜನಾದ ಸತ್ಯವಾಹ, ಅಂಗಿರಸ್ ಮತ್ತು ಶೌನಕ ಇವರು ಈ ಬ್ರಹ್ಮವಿದ್ಯೆಯನ್ನು ಪರಂಪರೆಯಿಂದ ಉಪದೇಶಮಾಡಿಕೊಂಡು ಬಂದರು ಎಂದು ಹೇಳಿರುವುದು "ಶಿರೋವ್ರತ" ಎಂದರೆ ಲಿಂಗಧಾರಣರೂಪವಾದ ಮಹಾವ್ರತವನ್ನು ಪ್ರಶಂಸೆಮಾಡುವುದಕ್ಕಾಗಿಯೇ ಹೊರತು ಬೇರೆಯಲ್ಲ. ಏಕೆಂದರೆ ಈ ಉಪನಿಷತ್ತಿನ ಕಡೆಯಲ್ಲಿ "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ

ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಂ" (೩-೨-೧೦) 'ಲಿಂಗಧಾರಣರೂಪ ವಾದ ಶಿರೋವ್ರತವನ್ನು ವಿಧ್ಯುಕ್ತವಾಗಿ ಅನುಷ್ಠಾನಮಾಡುವವರೇ ಈ ಬ್ರಹ್ಮವಿದ್ಯಾಧ್ಯಯನಕ್ಕೆ ಅರ್ಹರು' ಎಂದು ಹೇಳಿದೆ. ಆದುದರಿಂದ ಬ್ರಹ್ಮ ಮೊದಲಾದ ಇಲ್ಲಿ ಉಕ್ತವಾಗಿರುವ ಪರಂಪರೆಯು ಲಿಂಗಧಾರಣರೂಪವಾದ ಶಿರೋವ್ರತಿಯಾದ್ದರಿಂದಲೇ ಬ್ರಹ್ಮವಿದ್ಯೆಯ ಅಧ್ಯಯನ, ಅಧ್ಯಾಪನ ಮತ್ತು ಶ್ರವಣಾದಿಗಳಿಗೆ ಅರ್ಹವಾಯಿತು. ಅಂದಮೇಲೆ ಮನುಷ್ಯರು ಬ್ರಹ್ಮ ವಿದ್ಯೆಯನ್ನು ಪಡೆಯಲು ಸುತರಾಂ ಲಿಂಗಧಾರಣಾತ್ಮಕವಾದ ಶಿವದೀಕ್ಷೆ ಯನ್ನು ಪಡೆಯಲೇಬೇಕೆಂಬುದು ಕೈಮುತಿಕನ್ಯಾಯದಿಂದ ಸಿದ್ಧವೇ ಆಗುತ್ತದೆ. ಆದುದರಿಂದ ಇದೇ ಉದ್ದೇಶದಿಂದಲೇ ಭಗವತೀ ಶ್ರುತಿಯು ಉಪನಿಷತ್ತಿನ ಪ್ರಾರಂಭದಲ್ಲಿ ಬ್ರಹ್ಮವಿದ್ಯಾಸಂಪ್ರದಾಯವನ್ನು ತೋರಿಸಿ ರುತ್ತದೆ. ಮೇಲಾಗಿ ಜ್ಞಾನಕ್ಕೆ ವಿರೋಧವಲ್ಲದ ಪತಿಕರ್ಮಗಳಲ್ಲಿ ಇಷ್ಟ ಲಿಂಗಧಾರಣವೂ ಒಂದಾಗಿರುವುದರಿಂದಲೂ, ಇಂಥ ಪತಿಕರ್ಮವು ಮೋಕ್ಷಕ್ಕೆ ಕಾರಣವಾಗಿರುವುದರಿಂದಲೂ 'ನಾಯಮಾತ್ಮಾ ಪ್ರವಚನೇ ನ ಲಭ್ಯಃ (೩-೨-೩) 'ನೈತದಚೀರ್ಣವ್ರತೋಽಧೀತೇ' (೩-೨-೧೧) ಮುಂತಾದ ಶ್ರುತಿಗ ಳಿಂದ ಲಿಂಗಧಾರಣವಿಲ್ಲದಮೇಲೆ ಮೋಕ್ಷವಿಲ್ಲವೆಂದೂ 'ಬ್ರಹ್ಮವೇದ ಬ್ರಹ್ಮೈ ವ ಭವತಿ' (೩-೨-೯) ಲಿಂಗಧಾರಣವಿದ್ದಲ್ಲಿ ಮೋಕ್ಷವುಂಟೆಂದೂ ಹೇಳಿರುವುದ ರಿಂದ ಮೋಕ್ಷಪಡೆಯುವುದಕ್ಕೆ ಲಿಂಗಧಾರಣವು ಕಾರಣವೆಂದು ಘಂಟಾ ಘೋಷವಾಗಿದೆ. ಮತ್ತು 'ಏತಚ್ಛ್ರೇಯೋಽಭಿನಂದಂತಿ ಮೂಢಾಃ' (೧-೨-೭) ಎಂಬ ಮಂತ್ರಗಳಲ್ಲಿ ಪಶುಕರ್ಮಗಳು ತಿರಸ್ಕೃತವಾಗಿವೆ. ಆದುದರಿಂದ ಮೋಕ್ಷಕ್ಕೆ ಜ್ಞಾನ-ಕರ್ಮ ಸಮುಚ್ಚಯವು ಅವಶ್ಯಕ. ಇಲ್ಲಿ ಕರ್ಮವೆಂದರೆ ಪಶುಕರ್ಮಗಳು ಸೇರದಿರುವುದರಿಂದ ಲಿಂಗಧಾರಣರೂಪವಾದ ಪತಿಕರ್ಮವು ಅವಶ್ಯ ಸೇರಲೇಬೇಕಾಗಿದೆ. ಅದಕ್ಕಾಗಿಯೇ ಉಪನಿಷತ್ತಿನ ಪ್ರಾರಂಭದಲ್ಲಿ ಹೇಳಿರುವ ಬ್ರಹ್ಮವಿದ್ಯಾಸಂಪ್ರದಾಯವು ಲಿಂಗಧಾರಣರೂಪ ಶಿರೋವ್ರತದ ಉತ್ಕರ್ಷಗಾಗಿಯೇ ಎಂಬುದು ನಿರ್ವಿವಾದವಾಗಿದೆ.

ಆದರೆ ಕೆಲವರು ವ್ಯಾಖ್ಯಾನಕಾರರು "ಬ್ರಹ್ಮವಿದ್ಯಾಸಂಪ್ರದಾಯ ವನ್ನು ಇಲ್ಲಿ ಹೇಳಿರುವುದು ಅಭ್ಯಾಸಮಾಡುವವರಿಗೆ ಪ್ರವೃತ್ತಿಯುಂಟಾಗು ವುದಕ್ಕಾಗಿ" ಎಂದು ಹೇಳುತ್ತಾರೆ. ಇದು ಸಮಂಜಸವೆನಿಸುವುದಿಲ್ಲ.

ಏಕೆಂದರೆ ಹಿಂದೆ ಹೇಳಿದ ಅನುಬಂಧಚತುಷ್ಟಯದಿಂದಲೇ ಅಧ್ಯೇತೃಪ್ರವೃತ್ತಿ ಯುಂಟಾಗುವುದರಿಂದ ಮತ್ತು ಅದೇ ಉದ್ದೇಶಸಾಧನೆಗಾಗಿ ಬ್ರಹ್ಮವಿದ್ಯಾ ಸಂಪ್ರದಾಯವನ್ನು ಹೇಳಿದೆಯೆಂಬುದು ಪಿಷ್ಟಪೇಷಣದಂತೆ ವ್ಯರ್ಥವಾಗುತ್ತದೆ. ಇಷ್ಟೇ ಅಲ್ಲದೆ 'ಬ್ರಹ್ಮವಿದ್ಯಾಸ್ತುತ್ಯರ್ಥವಾಗಿ ಬ್ರಹ್ಮವಿದ್ಯಾ ಸಂಪ್ರದಾಯ ಪ್ರದರ್ಶನವೆಂದೂ' ಅವರು ಹೇಳುತ್ತಾರೆ. ಇದೂ ಸಹ ಸರಿಯಲ್ಲ. ಏಕೆಂದರೆ ಇದೂ ಅನುಬಂಧಚತುಷ್ಟಯದಿಂದಲೇ ಸಿದ್ಧವಾಗುತ್ತದೆ. ಅಲ್ಲದೆ ಚತುರ್ಮುಖಬ್ರಹ್ಮ ಮೊದಲು ಶೌನಕನವರೆಗೆ ಹೇಳಿರುವ ಋಷಿಗಳೆಲ್ಲರು ಲಿಂಗಧಾರಣಮಹಾವ್ರತವೆಂಬ ಶಿರೋವ್ರತಿಗಳೇ ಆಗಿದ್ದವರೆಂಬ ಅಂಶವು 'ತೇಷಾಮೇವೈತಾಂ' ಎಂಬ ಮಂತ್ರದಿಂದ ಸಿದ್ಧವೇ ಆಗುತ್ತದೆ. ಈ ವಿಷಯವನ್ನು ಮುಂದಿನ ಮಂತ್ರವ್ಯಾಖ್ಯಾನದಲ್ಲಿ ವಿಸ್ತರಿಸಲಾಗುತ್ತದೆಯೆಂಬುದನ್ನು ಭಾಷ್ಯಕಾರರು 'ವಕ್ಷ್ಯಾಮಃ" ಎಂಬುದರಿಂದ ಸೂಚಿಸಿರುತ್ತಾರೆ.



## ಬ್ರಹ್ಮವಿದ್ಯಾಸಂಪ್ರದಾಯಕರ್ತೃಗಳ ಪರಂಪರೆ

ಲಿಂಗಧಾರಣದೀಕ್ಷಾಸಂಪನ್ನರೂ ಬ್ರಹ್ಮವಿದ್ಯಾಸಂಪ್ರದಾಯಕರ್ತೃಗಳೂ ಆದ ಬ್ರಹ್ಮಾದಿಗಳ ಆಖ್ಯಾಯಿಕೆಯು 'ಮುಂದಿನ ಮೂರು ಮಂತ್ರಗಳಲ್ಲಿ ಉಕ್ತವಾಗಿದೆ—

ಮೂಲ--ಬ್ರಹ್ಮಾದೇವಾನಾಂ ಪ್ರಥಮಃ ಸಂಬಭೂವ
ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ ।
ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾ.
ಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ॥ ೧ ॥

ಭಾವಾನುವಾದ—ದೇವತೆಗಳಿಗೆ ಮೊದಲನೆಯವನೂ, ವಿಶ್ವಕರ್ತನೂ, ಭುವನರಕ್ಷಕನೂ ಆದ ಬ್ರಹ್ಮನು ಸಂಭವಿಸಿದನು. ಅವನು ಅಥರ್ವನೆಂಬ ಹಿರಿಯಮಗನಿಗೆ ಎಲ್ಲ ವಿದ್ಯೆಗಳ ಪ್ರತಿಷ್ಠೆಯಾಗಿರುವ ಬ್ರಹ್ಮವಿದ್ಯೆಯನ್ನು ಹೇಳಿದನು ॥ ೧ ॥

ಅರ್ಥ— ದೇವಾದೀನಾಂ-ವಿಷ್ಣು ಮೊದಲಾದವರಿಗೆ, ಪ್ರಥಮಃ-ಮೊದಲನೆಯವನಾದ, ಬ್ರಹ್ಮಾ-ಚತುರ್ಮುಖಬ್ರಹ್ಮನು, ಸಂಬಭೂವ-ಪರಮೇಶ್ವರನಿಂದ ಉತ್ಪನ್ನನಾದನು. ವಿಶ್ವಸ್ಯ-ಸ್ಥಾವರಜಂಗಮಾತ್ಮಕವಾದ ಜಗತ್ತಿಗೆ, ಕರ್ತಾ-ಸೃಷ್ಟಿಕರ್ತನೂ, ಭುವನಸ್ಯ-ಲೋಕಕ್ಕೆ, ಗೋಪ್ತಾ-ಪಾಲಕನೂ ಆದ, ಸಃ-ಆ ಚತುರ್ಮುಖಬ್ರಹ್ಮನು, ಸರ್ವವಿದ್ಯಾಪ್ರತಿಷ್ಠಾಂ-ಎಲ್ಲ ವಿದ್ಯೆಗಳಿಗೂ ಅಧಿಷ್ಠಾನಭೂತವಾದ, ಬ್ರಹ್ಮವಿದ್ಯಾಂ-ವೇದವಿದ್ಯೆಯನ್ನು ಜ್ಯೇಷ್ಠಪುತ್ರಾಯ-ಚೊಚ್ಚಿಲಮಗನಾದ, ಅಥರ್ವಾಯ_ ಅಥರ್ವನಿಗೆ, ಪ್ರಾಹ_ಉಪದೇಶಿಸಿದನು.

ಜಗತ್ಪಿತೃವಾದ ಪರಮೇಶ್ವರನಿಂದ ಚತುರ್ಮುಖಬ್ರಹ್ಮನು ವಿಷ್ಣು ಮೊದಲಾದವರಿಗಿಂತಲೂ ಮೊದಲು ಹುಟ್ಟಿದವನು. ಇಲ್ಲಿ ಚತುರ್ಮುಖ ಬ್ರಹ್ಮನಿಗೆ 'ಸ್ವಯಂಭೂಃ' ಎಂದರೆ 'ತನಗೆ ತಾನೆ ಹುಟ್ಟಿದವನು' ಎಂಬ ವಿಶೇಷಣವಿರುವುದರಿಂದ ಅಂಥ ಬ್ರಹ್ಮನು ಪರಶಿವನಿಂದ ಹುಟ್ಟಿದುದು ಹೇಗೆ? ಎಂಬ ಶಂಕೆಯುದಿಸುವುದು. ಆದರೆ 'ಚೈತ್ರಮೈತ್ರರಲ್ಲಿ ಚೈತ್ರನು ಮೊದಲು ಹುಟ್ಟಿದನು' ಎಂಬ ಅರ್ಥದಲ್ಲಿ 'ಚೈತ್ರಃ ಪ್ರಥಮಃ ಸಂಬಭೂವ' ಎಂದ ಮಾತ್ರದಿಂದ 'ಚೈತ್ರನು ತನಗೆ ತಾನೆ ಹುಟ್ಟಿದನು' ಎಂದು ಹೇಳಲು ಸಾಧ್ಯವೆ? ಮತ್ತು ಈ ಚತುರ್ಮುಖಬ್ರಹ್ಮನು 'ಸ್ವಯಂಭೂಃ' ಎಂದು ಹೇಳುವ ಶ್ರುತಿಪ್ರಮಾಣವೂ ಸಹ ಇರುವುದಿಲ್ಲ. ಮೇಲಾಗಿ ಶ್ರುತಿಸ್ಮೃತಿಗಳಿಗೆ ವಿರೋಧವುಂಟಾದಾಗ ಶ್ರುತಿಯೇ ಪ್ರಬಲವೆನಿಸುತ್ತದೆ. ಆದುದರಿಂದ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ। ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ" (ಶ್ವೇ. ೬-೧೮) 'ಯಾರು ಚತುರ್ಮುಖಬ್ರಹ್ಮನನ್ನು ಸೃಜಿಸಿ ಅವನಿಗೆ ವೇದೋಪದೇಶಮಾಡಿದನೋ ಅಂಥ ಪರಶಿವನಿಗೆ ಮುಮುಕ್ಷುವಾದ ನಾನು ಶರಣಾಗುತ್ತೇನೆ'. "ವಿಶ್ವಾಧಿಕೋ ರುದ್ರೋ ಮಹರ್ಷಿಃ। ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ" (ಮ.ನಾ.ಅನು ೧೦) 'ಲೋಕಾಧಿಕನೂ ಮಹರ್ಷಿಪದವಾಚ್ಯನೂ ಆದ ಮಹಾರುದ್ರನು ಚತುರ್ಮುಖಬ್ರಹ್ಮನನ್ನು ಮೊದಲು ಸೃಜಿಸಿದನು' ಮುಂತಾದ ಶ್ರುತಿಗಳು ಬ್ರಹ್ಮನು ಪರಶಿವನಿಂದ ಹುಟ್ಟಿದನೆಂಬುದನ್ನು ಹೇಳುತ್ತವೆ. ಮಹಾಶಿವಭಕ್ತನಾದ ಹರದತ್ತಾಚಾರ್ಯನು 'ಏಷಾ ಮಹೋಪನಿಷದಾಹ, ಹಿರಣ್ಯಗರ್ಭಂ ಜಾತಂ ತದೇವ

ಭಗವನ್ ಪ್ರಥಮಂ ಸುರಾಣಾಂ" ಎಂದು ಹೇಳಿದ್ದಾನೆ. ಆದುದರಿಂದ ಚತುರ್ಮುಖಬ್ರಹ್ಮನು ಪರಶಿವನಿಂದ ಸೃಷ್ಟಿಸಲ್ಪಟ್ಟನೆಂಬುದು ಸಿದ್ಧವಾಯಿತು. ಇನ್ನು ಈ ಬ್ರಹ್ಮನೇ ವಿಶ್ವದ ಸೃಷ್ಟಿಕರ್ತೃವು ಮತ್ತು ಸ್ಥಿತಿಕರ್ತನು ಎಂದರೆ ಪಾಲಕನು ಎಂದು ಮೂಲದಲ್ಲಿ ಹೇಳಿರುವುದನ್ನು ಭಾಷ್ಯಕಾರರು ಹೀಗೆ ವಿಮರ್ಶೆಮಾಡಿರುತ್ತಾರೆ. ಯದ್ಯಪಿ ಚತುರ್ಮುಖಬ್ರಹ್ಮನಿಗೆ ಜಗತ್ತಿನ ಸೃಷ್ಟಿಕರ್ತೃತ್ವವು ಉಚಿತವೇ ಆಗಿದೆ. ಆದರೆ ವಿಷ್ಣುವಿಗೆ ನಿಯಮಿತವಾದ ಪಾಲನ ಕರ್ತೃತ್ವವನ್ನು ಬ್ರಹ್ಮನಿಗೆ ಹೇಳಿರುವುದು ಕೇವಲ ಸ್ತುತಿಪರವಾದುದೆಂದೇ ಭಾವಿಸಬೇಕು. ಏಕೆಂದರೆ ಕ್ರಿಯಾಸಾರದಲ್ಲಿ "ಯದಾ ತಮಸ್ತದಾ ದೇವಃ ಅಧ್ಯಾಸ್ತೇ ಪರಮೇಶ್ವರಃ । ಬ್ರಹ್ಮವಿಷ್ಣ್ವಾದಿಕಾನ್ ಸರ್ವಾನ್ ಸೃಷ್ಟ್ವಾದೌ ಪರಮೇಶ್ವರಃ ॥ ಚಕಾರ ದೀಕ್ಷಾಂ ತೇಷಾಂ ಚ ವೀರಶೈವಾಗಮಾಖ್ಯವಃ । ತದಾ ಪ್ರಭೃತಿ ವಿಷ್ಣ್ವಾದ್ಯಾಃ ಶಿವಸ್ಯ ಪರಮಾತ್ಮನಃ ॥ ಆಜ್ಞಯಾ ಶಕ್ತಿಮಂತಶ್ಚ ಲೋಕೇಷು ಖ್ಯಾತಿಮಾಪ್ನುಯುಃ । ಯಸ್ಯಾಜ್ಞಯಾ ಜಗತ್ಸೃಷ್ಟ್ವಾ ವಿರಿಂಚಿಃ ಪಾಲಕೋ ಹರಿಃ ॥ ಸಂಹರ್ತಾ ಕಾಲರುದ್ರಾಖ್ಯಃ ಶಿವಃ ಸಾಂಬಸ್ಸನಾತನಃ । ಘೃತರೀತಿಘನೀಭೂತಸ್ಸಚ್ಚಿದಾನಂದಲಕ್ಷಣಃ ॥ " "ಸೃಷ್ಟಿಗೆ ಮೊದಲು ಪರಮೇಶ್ವರನೊಬ್ಬನೇ ಇದ್ದನು. ಅವನು ಮೊದಲು ಬ್ರಹ್ಮ, ವಿಷ್ಣು ಮೊದಲಾದವರನ್ನು ಸೃಜಿಸಿ ಅವರಿಗೆ ವೀರಶೈವದೀಕ್ಷೆಯಿತ್ತನು. ಮುಂದೆ ಅವರು ಶಕ್ತಿವಂತರಾದರು. ಶಿವಾಜ್ಞೆಯಪ್ರಕಾರ ಬ್ರಹ್ಮನು ಜಗತ್ತಿನ ಸೃಷ್ಟಿ, ವಿಷ್ಣುವು ಪಾಲನೆ, ಕಾಲರುದ್ರನು ಸಂಹಾರರೂಪವಾದ ಕೆಲಸಗಳಲ್ಲಿ ನಿಯಮಿತರಾದರು. ಘೃತಕಾಠಿನ್ಯನ್ಯಾಯ (ಕರಗಿದ ತುಪ್ಪವು ಹೆಪ್ಪುಗೊಳ್ಳುವುದು) ದಂತೆ ಈ ಮೂರು ಮೂರ್ತಿಗಳ ಮೂಲಕಾರಣನು ಆ ಪರಶಿವನೆ ಆಗಿರುತ್ತಾನೆ' ಎಂದು ಹೇಳಿದೆ. ಸಿದ್ಧಾಂತಶಿಖಾಮಣಿಯಲ್ಲಿಯೂ ಸಹ—

'ಜಗತ್ಸಿಸೃಕ್ಷುಃ ಪ್ರಥಮಂ ಬಹ್ಮಾಣಂ ಸರ್ವದೇಹಿನಾಂ । ಕರ್ತಾರಂ ಸರ್ವಲೋಕಾನಾಂ ವಿದಧೇ ವಿಶ್ವನಾಯಕಃ ॥ ತಸ್ಮೈ ಪ್ರಥಮಪುತ್ರಾಯ ಶಂಕರಃ ಶಕ್ತಿಮಾನ್ ವಿಭುಃ । ಸರ್ವಜ್ಞಃ ಸಕಲಾ ವಿದ್ಯಾಸ್ಸಾನುಗ್ರಹಮುಪಾದಿಶತ್ ॥ " (ಪರಿ ೨-೧೫) 'ವಿಶ್ವಪ್ರಭುವಾದ ಪರಮೇಶ್ವರನು ಎಲ್ಲ ದೇಹಿಗಳಿಗಿಂತ ಮೊದಲು ಚತುರ್ಮುಖಬ್ರಹ್ಮನನ್ನು ಸೃಜಿಸಿ, ಅವನಿಗೆ ಸಕಲ ವಿದ್ಯೆಗಳನ್ನೂ ಅನುಗ್ರಹಿಸಿದನು.' ಎಂದು ಉಕ್ತವಾಗಿದೆ.

ಶಂಕೆ—'ನಾರಾಯಣಾತ್ ಬ್ರಹ್ಮಾ ಜಾಯತೇ, ನಾರಾಯಣಾತ್ ರುದ್ರೋ ಜಾಯತೇ' (ಮ.ನಾ. ೧-೧,ಎಂಬ ಶ್ರುತಿವಚನದಂತೆ ನಾರಾಯಣನಿಂದಲೇ ಬ್ರಹ್ಮ ಮತ್ತು ರುದ್ರರು ಉತ್ಪನ್ನರಾದರು ಎಂಬುದಕ್ಕೆ ಸಮಾಧಾನವೇನು?

ಸಮಾಧಾನ—ಹಾಗಲ್ಲ. "ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಂ। ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ (ಅಥರ್ವಶಿಖಾ ೧)" ಈಶಾನಪದವಾಚ್ಯನಾದ ಪರಶಿವನನ್ನೇ ಚನ್ನಾಗಿ ಧ್ಯಾನಮಾಡಬೇಕು. ಅವನಿಂದಲೇ ಬ್ರಹ್ಮ ವಿಷ್ಣು ಮೊದಲಾದವರೆಲ್ಲರೂ ಉದ್ಭವಿಸುತ್ತಾರೆ' ಎಂದು ಹೇಳಿರುವುದರಿಂದ ಶಿವನೇ ಸರ್ವಕ್ಕೂ ಕಾರಣನೆಂದು ವ್ಯಕ್ತವಾಗುತ್ತದೆ. ವಿಷ್ಣುವಿನ ಉತ್ಪತ್ತಿಯನ್ನು ಕುರಿತು ಋಗ್ವೇದದಲ್ಲಿ "ವಿಷ್ಣುರಿತ್ಥಾ ಪರಮಸ್ಯ ವಿದ್ವಾನ್ ಜಾತಃ" (ಋ. ೭-೫-೨೯) ಜ್ಞಾನಿಯಾದ ಪರಮ ವಿಷ್ಣುವು ಪರಶಿವನಿಂದ ಹುಟ್ಟಿದವನು? 'ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ"(ಋ. ೭-೪-೭) ಈ ಮಂತ್ರಾರ್ಥವು ಕಾಶೀಖಂಡದಲ್ಲಿ ಉಪಬೃಂಹಿತವಾಗಿದೆ. "ಮತೀನಾಂ ದ್ಯಾವಾಪೃಥಿವ್ಯೋರ್ವನ್ಹೇಃ ಸೂರ್ಯಸ್ಯ ವಜ್ರಿಣಃ। ಸಾಕ್ಷಾದಪಿ ಚ ವಿಷ್ಣೋರ್ವೈ ಸೋಮೋ ಜನಯಿತೇಶ್ವರಃ॥" ಸಾಕ್ಷಾತ್ ಪರಮೇಶ್ವರನೇ ಮತಿ, ದ್ಯಾವಾಪೃಥಿವೀ, ಅಗ್ನಿ, ಸೂರ್ಯ, ಇಂದ್ರ ಪರಮ ವಿಷ್ಣುಗಳನ್ನು ಸೃಜಿಸಿದವನು.' ಎಂದು ಹೇಳಿದೆ. ಅಂದಮೇಲೆ ಅಜಾತನಾದ ಪರಮೇಶ್ವರನಿಂದ ಬ್ರಹ್ಮನಿಗೆ ಉತ್ಪತ್ತಿಯನ್ನು ಹೇಳಬೇಕೇ ಹೊರತು ಜಾತನಾದ ವಿಷ್ಣುವಿನಿಂದ ಶಿವನು ಹುಟ್ಟಿದನೆಂದು ಹೇಳುವುದು ಯುಕ್ತವಾದುದಲ್ಲ.

ಶಂಕೆ—ಹಾಗಾದರೆ 'ನಾರಾಯಣಾತ್ ಬ್ರಹ್ಮಾ ಜಾಯತೆ' ಎಂಬ ಶ್ರುತಿಯ ಗತಿಯೇನು?

ಸಮಾಧಾನ—ಈ ಶ್ರುತಿಯು ಅವಾಂತರ ಸೃಷ್ಟಿ ವಿಷಯಕವಾದುದು ಎಂದು ಹೇಳಬೇಕು. ಈ ಅಂಶವು ಶೈವಪುರಾಣದ ವಾಯುವೀಯ ಸಂಹಿತೆಯಲ್ಲಿ ಹೀಗೆ ಉಕ್ತವಾಗಿದೆ–"ತ್ರಯಸ್ತೇ ಕಾರಣಾತ್ಮಾನೋ ಜಾತಾಃ ಸಾಕ್ಷಾ

ನ್ಮಹೇಶ್ವರಾತ್ । ಚರಾಚರಸ್ಯ ವಿಶ್ವಸ್ಯ ಸರ್ಗಸ್ಥಿತ್ಯಂತಹೇತವಃ ॥ ಪಿತ್ರಾ ನಿಯಮಿತಾಃ ಪೂರ್ವಂ ತ್ರಯೋಽಪಿ ತ್ರಿಷು ಕರ್ಮಸು । ಬ್ರಹ್ಮಾ ಸರ್ಗೇ ಹರಿಸ್ತ್ರಾಣೇ ರುದ್ರಃ ಸಂಹರಣೇ ಪುನಃ ॥ ತಥಾಪ್ಯನ್ಯೋನ್ಯಮಾತ್ಸರ್ಯಾದ ನ್ಯೋನ್ಯಾತಿಶಯಾರ್ಥಿನಃ । ತಪಸಾ ತೋಷಯಿತ್ವಾ ಸ್ವಂ ಪಿತರಂ ಚಂದ್ರ ಶೇಖರಂ ॥ ಲಬ್ಧಾ ಸರ್ವಾತ್ಮತಾ ತಸ್ಯ ಪ್ರಸಾದಾತ್ಪರಮೇಷ್ಠಿನಃ । ಬ್ರಹ್ಮ ನಾರಾಯಣೌ ಪೂರ್ವಂ ರುದ್ರಃ ಕಲ್ಪಾಂತರೇಽಸೃಜತ್ ॥ ಕಲ್ಪಾಂತರೇ ಪುನರ್ಬ್ರಹ್ಮಾ ರುದ್ರವಿಷ್ಣೂ ಜಗನ್ಮಯಃ । ವಿಷ್ಣುಶ್ಚ ಭಗವಾನ್ ರುದ್ರಂ ಬ್ರಹ್ಮಾಣಮಸೃಜತ್ಪುನಃ । ನಾರಾಯಣಂ ಪುನರ್ಬ್ರಹ್ಮಾ ಬ್ರಹ್ಮಾಣಂ ಚ ಪುನರ್ಭವಃ" ॥ (ಶೈ.ವಾ.ಸಂ.ಪೂ.ಭಾ. ೧೧. ಅ.) 'ಸಾಕ್ಷಾತ್ ಪರಮೇಶ್ವರನಿಂದ ಬ್ರಹ್ಮ ವಿಷ್ಣು ಮತ್ತು ಕಾಲರುದ್ರರು ಹುಟ್ಟಿದರು. ಇವರು ಕ್ರಮವಾಗಿ ಸೃಷ್ಟಿ ಸ್ಥಿತಿ ಮತ್ತು ಸಂಹಾರ ಕೃತ್ಯಗಳಲ್ಲಿ ನಿಯುಕ್ತರಾದರು. ಆದರೂ ಮುಂದೆ ಅವರಲ್ಲಿ ಸ್ಪರ್ಧೆಹುಟ್ಟಿ ಶಿವನನ್ನು ಕುರಿತು ತಪಸ್ಸುಮಾಡಿ ಇನ್ನೂ ಹೆಚ್ಚಿನ ಸಾಮರ್ಥ್ಯಪಡೆದರು. ತರುವಾಯ ಅವರಲ್ಲಿ ಕಾಲರುದ್ರನು ಕಲ್ಪಾಂತರದಲ್ಲಿ ಬ್ರಹ್ಮ ವಿಷ್ಣುಗಳನ್ನು ಸೃಜಿಸಿದನು. ಮತ್ತೊಂದು ಕಲ್ಪದಲ್ಲಿ ಬ್ರಹ್ಮನು ರುದ್ರ ವಿಷ್ಣುಗಳನ್ನು ಸೃಜಿಸಿದನು. ಇನ್ನೊಂದು ಕಲ್ಪದಲ್ಲಿ ವಿಷ್ಣುವು ರುದ್ರ ಬ್ರಹ್ಮರನ್ನು ಹುಟ್ಟಿಸಿದನು. ಮತ್ತೆ ನಾರಾಯಣನನ್ನು ಬ್ರಹ್ಮನೂ: ಬ್ರಹ್ಮನನ್ನು ಭವನು ಸೃಜಿಸಿದನು' ಇದಲ್ಲದೆ ನಾರಾಯಣಾದಿ ಉಪನಿಷತ್ತುಗಳಲ್ಲಿ ನಾರಾಯಣನು ತ್ರಿಮೂರ್ತಿಗಳಿಗಿಂತಲೂ ಬೇರೆಯಾದವನೆಂದು ಹೇಳಿಲ್ಲ. ಆದರೆ ಶಿವನ ವಿಷಯದಲ್ಲಿ "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ । ಶಿವೋಽದ್ವೈತಮ್" (ಮಾಂಡೂಕ್ಯ ೧-೭) ಎಂಬ ಶ್ರುತಿಯಲ್ಲಿ ಆತನು ತ್ರಿಮೂರ್ತಿಗಳಿಗಿಂತಲೂ ಅತಿರಿಕ್ತನೂ ಶಾಂತನೂ ಅದ್ವಿತೀಯನೂ ನಾಲ್ಕನೆಯವನೂ ಎಂದು ಸ್ಪಷ್ಟವಾಗಿ ಹೇಳಿದೆ. ಆದುದರಿಂದ ಆ ಪರಮೇಶ್ವರನೇ ಪರಬ್ರಹ್ಮನೆಂದು ನಿರ್ಧಾರವಾಗುತ್ತದೆ.

ಇದರಂತೆ 'ನಾರಾಯಣಾತ್ ರುದ್ರೋ ಜಾಯತೇ 'ಎಂಬ ಶ್ರುತಿಯೂ ಸಹ ಕಾಲರುದ್ರಪರವಾದುದೆಂದು ತಿಳಿಯಬೇಕೇ ಹೊರತು ಮಹಾರುದ್ರನ ವಿಷಯವಾಗಿ ಹೇಳಿದುದಲ್ಲ. ಏಕೆಂದರೆ "ಅಜಾತ ಇತ್ಯೇವ ಕಶ್ಚಿದ್ಭೀರುಃ

ಪ್ರಪದ್ಯತೇ (ಶ್ವೇ.೪.೨೧) ಸಂಸಾರಭೀರುವಾದ ಮುಮುಕ್ಷುವು ಜನನ ಮರಣ ರಹಿತನಾದ ಪರಶಿವನನ್ನು 'ಅಜಾತ' ನೆಂದು ಶರಣುಹೋಗುತ್ತಾನೆ.' ಎಂಬ ಶ್ರುತಿಯು ಮಹಾರುದ್ರನು 'ಅಜಾತ'ನೆಂಬುದನ್ನು ಸ್ಪಷ್ಟಪಡಿಸುತ್ತದೆ.

## ಕನ್ನಡ ಭಾವದರ್ಪಣ ಸಂಗ್ರಹ*

ಈ ಮಂತ್ರದಲ್ಲಿರುವ 'ಬ್ರಹ್ಮವಿದ್ಯಾಂ' ಎಂಬ ಶಬ್ದಕ್ಕೆ 'ವೇದಸ್ತತ್ತ್ವಂ ತಪೋ ಬ್ರಹ್ಮಾ' ಎಂಬ ಕೋಶಪ್ರಮಾಣದಿಂದ ಉಪದೇಶಾರ್ಹವಾದ ಶಬ್ದಾತ್ಮಕ 'ವೇದವಿದ್ಯೆ' ಎಂದು ಅರ್ಥ. ಈ ಪದಕ್ಕೆ 'ಬ್ರಹ್ಮಜ್ಞಾನ' ನೆಂದು ಇತರರು ಮಾಡಿರುವ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ಆಂತರೀಯ ಜ್ಞಾನವು ಮತ್ತೊಬ್ಬರಿಗೆ ಉಪದೇಶಮಾಡಲು ಬರುವುದಿಲ್ಲ.

ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾ-
  ಥರ್ವಾ ತಾಂ ಪುರೋವಾಚಾಂಗಿರೇ ಬ್ರಹ್ಮವಿದ್ಯಾಮ್ ।
ಸ ಭರದ್ವಾಜಾಯ ಸತ್ಯವಾಹಾಯ ಪ್ರಾಹ
  ಭಾರದ್ವಾಜೋಽಂಗಿರಸೇ ಪರಾವರಾಮ್ ॥ ೨ ॥

(ಬ್ರಹ್ಮಾ) ಚತುರ್ಮುಖಬ್ರಹ್ಮನು (ಯಾಂ) ಯಾವುದನ್ನು ಪೂರ್ವ ಗುರುವಾದ ಪರಶಿವನಿಂದ ಪಡೆದುಕೊಂಡನೊ ಆ ಬ್ರಹ್ಮವಿದ್ಯೆಯನ್ನು (ಅಥ

---

* ಸೂಚನೆ:— ಆತ್ಮಮೂಲ್ಯ ವಿಷಯಗರ್ಭಿತವಾದ ಈ ಭಾಷ್ಯಕ್ಕೆ ವಿಸ್ತಾರವಾದ ಸರಲ ಕನ್ನಡ ಭಾಷಾಂತರವು 'ಭಾವದರ್ಪಣ'ವೆಂಬ ಹೆಸರಿನಿಂದ ಸಿದ್ಧವಾಗಿದ್ದು ಅದರ ೧೬ ಪುಟಗಳು ಮಾತ್ರ ಇಲ್ಲಿ ಅಚ್ಚಾಗಿವೆ- ಇಲ್ಲಿಂದ ಮುಂದೆ ಗ್ರಂಥವಿಸ್ತರ ಭಯದಿಂದ "ಭಾವದರ್ಪಣಸಂಗ್ರಹ" ವನ್ನು ಮಾತ್ರ ಕೊಡಲಾಗುತ್ತದೆ. ಸಹಾಯ ಸಂಪತ್ತಿ ಯೊದಗಿದಲ್ಲಿ ಕನ್ನಡ ಭಾಷಾಂತರವನ್ನು ಸಂಪೂರ್ಣವಾಗಿ ಪ್ರಕಟಿಸಲಾಗುವುದು. ಅಲ್ಲಲ್ಲಿ ಭಾಷ್ಯೋಕ್ತ ವಿಚಾರಗಳ ಸೂಚನೆಯನ್ನು ಮಾತ್ರ ಕೊಡಲಾಗಿದೆ.

—ಸಂಪಾದಕ

ರ್ಣೇ) ಅಥರ್ವಣನೆಂಬ ಪುತ್ರ (ಶಿಷ್ಯ) ನಿಗೆ (ಪ್ರವದೇತ) ಉಪದೇಶಿಸಿದನು. (ಅಥರ್ವಾ) ಆ ಅಥರ್ವನು (ತಾಂ) ಅದನ್ನು (ಪುರಾ) ಮೊದಲು (ಅಂಗಿರೇ) ಅಂಗಿರನೆಂಬ ಋಷಿಗೆ (ಉವಾಚ) ಉಪದೇಶಿಸಿದನು. (ಸಃ) ಆ ಅಂಗಿರನು (ಭಾರದ್ವಾಜಾಯ) ಭರದ್ವಾಜನ ಮಗನಾದ (ಸತ್ಯವಾಹಾಯ) ಸತ್ಯವಾಹನಿಗೆ (ಪ್ರಾಹ) ಹೇಳಿದನು. (ಸ ಚ) ಆ ಭಾರದ್ವಾಜನು (ಅಂಗಿರಸೇ) ಅಂಗಿರಸ್ ಎಂಬ ತನ್ನ ಮಗನಿಗೆ (ಪರಾವರಾಂ) ಕಾರ್ಯಕಾರಣರೂಪವಾದ ಬ್ರಹ್ಮವಿದ್ಯೆಯನ್ನು ಉಪದೇಶಿಸಿದನು.

ಈ ಮಂತ್ರಭಾಷ್ಯದಲ್ಲಿ ಉಕ್ತವಾದ 'ಪರಾವರಾಂ' ಎಂಬ ಪದಕ್ಕೆ "ಪರಾ ಚ ಅವರಾ ಚ ಪರಾವರಾ" ಎಂಬ ವಿಶೇಷಣೋಭಯ ಕರ್ಮಧಾರಯವನ್ನು ತೋರಿಸಿ ವೇದವಿದ್ಯೆಯು ಕಾರಣ (ಪರಾ) ರೂಪವೆಂತಲೂ ಕಾರ್ಯ (ಅವರಾ] ರೂಪವೆಂತಲೂ ಎರಡು ವಿಧವೆಂದು ಭಾಷ್ಯಕಾರರು ಸ್ಪಷ್ಟಪಡಿಸಿದ್ದಾರೆ. ಕೆಲವರು ಈ ಶಬ್ದಕ್ಕೆ 'ಪರಸ್ಮಾತ್ ಅವರೇಣ ಪ್ರಾಪ್ತಾಂ ಪರಾವರಾಂ' ಎಂದರೆ ಶ್ರೇಷ್ಠನ ದೆಸೆಯಿಂದ ಕನಿಷ್ಠನು ಪಡೆದುಕೊಂಡ ವಿದ್ಯೆ ಎಂದು ಕ್ಲಿಷ್ಟಗತಿಯಿಂದ ಅರ್ಥಮಾಡಿರುತ್ತಾರೆ. ಇದು ಮುಂದೆ ಹೇಳುವ 'ದ್ವೇವಿದ್ಯೇ ವೇದಿತವ್ಯೆ' ಎರಡು ವಿದ್ಯೆಗಳನ್ನು ತಿಳಿಯಬೇಕು. ಎಂಬ ಸಂದರ್ಭಕ್ಕೆ ವಿರೋಧವಾಗುತ್ತದೆಯೆಂದು ಸಪ್ರಮಾಣವಾಗಿ ಪ್ರತಿಪಾದಿಸಿದ್ದಾರೆ.

## ಭಕ್ತಸ್ಥಳ

ಶೌನಕನ ಪ್ರಶ್ನೆ-

ಶೌನಕೋ ಹ ವೈ ಮಹಾಶಾಲೋಽಂ
ಗಿರಸಂ ವಿಧಿವದುಪಪನ್ನಃ ಪಪ್ರಚ್ಛ ।
ಕಸ್ಮಿನ್ನು ಭಗವೋ ವಿಜ್ಞಾತೇ
ಸರ್ವಮಿದಂ ವಿಜ್ಞಾತಂ ಭವತೀತಿ ॥ ೩ ॥

(ಮಹಾಶಾಲಃ) ಶಿವಗೃಹಸ್ಥಾಶ್ರಮಿಯಾದ (ಶೌನಕಃ) ಶುನಕ ಋಷಿಪುತ್ರನಾದ ಶೌನಕನು ಘೋರಾಪಾರನಿಸ್ಸಾರಸಂಸಾರದಲ್ಲಿ ಸಂಘಟಿಸುವ

ತಾಪತ್ರಯವೆಂಬ ಅಗ್ನಿಯಿಂದ ಬೆಂದು ಬಳಲಿ ಶಾಂತಿಯನ್ನು ಬಯಸಿ (ವಿಧಿವತ್) ವಿಧಿಗನುಸಾರವಾಗಿ ಸಮಿತ್ತು ಕುಶ ಕುಸುಮ ಫಲಾದಿ ಗುರೂಪಯುಕ್ತದ್ರವ್ಯಗಳನ್ನು ತೆಗೆದುಕೊಂಡು (ಉಪಪನ್ನಃ) ಆಂಗಿರಸನ ಸಮೀಪವನ್ನೈದಿ (ಪ್ರಪಚ್ಛ) ಪ್ರಶ್ನೆಮಾಡಿದನು. (ಭಗವ) ಎಲೈ ಶಿವಜ್ಞಾನಮಹೋದಧಿಯೆ, (ಕಸ್ಮಿನ್ನು) ಕಾರ್ಯಕಾರಣಾತ್ಮಕವಾದ ಯಾವ ವಸ್ತುವನ್ನು (ವಿಜ್ಞಾತೇ) ತಿಳಿಯಲು (ಸರ್ವಮಿದಂ) ಕಾರಣಾಭಿನ್ನವಾದ ಜಗದ್ರೂಪ ಈ ಕಾರ್ಯವೆಲ್ಲವೂ (ವಿಜ್ಞಾತಂ ಭವತಿ) ತಿಳಿಯುವುದೊ ಅಂಥ ವಸ್ತು ವಾವುದು ?" ಎಂದು ಕೇಳಿದನು.

ಈ ಮಂತ್ರದಲ್ಲಿರುವ ಹ ವೈ ಎಂಬವು ನಿಪಾತಗಳು

ವಿ.— ಈ ಮಂತ್ರಭಾಷ್ಯದಲ್ಲಿ ಶೌನಕನು ಶಿವಗೃಹಸ್ಥಾಶ್ರಮಿಯೆಂಬುದನ್ನು ಅನೇಕ ಪ್ರಮಾಣಗಳಿಂದ ಸಮರ್ಥಿಸುತ್ತಾ "ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋಽಥ ಕಾಶ್ಯಪಃ । ಭರದ್ವಾಜೋಂಗಿರಾ ಅತ್ರಿರ್ವಶಿಷ್ಠೋ ರೋಮಹರ್ಷಣಃ ॥ ಏತೇ ಸರ್ವೇ ಮಹಾಭಾಗಾ ಅತಿವರ್ಣಾಶ್ರಮೇ ರತಾಃ । ವೀರಶೈವಾಸ್ಸಮಾಖ್ಯಾತಾ ಜೀವನ್ಮುಕ್ತಾ ನ ಸಂಶಯಃ" (ಕ್ರಿಯಾಸಾರ ಉ.೧) ಎಂಬ ಪ್ರಮಾಣದಿಂದ ಆಂಗಿರಸನು ಲಿಂಗಧಾರಣಾತ್ಮಕ ಶಿರೋವ್ರತಿಯೆಂದು ಸಿದ್ಧ ಮಾಡಲಾಗಿದೆ. ಮೇಲಾಗಿ ವೀರಶೈವರು ಅತ್ಯಾಶ್ರಮಿಗಳು. ಇಲ್ಲಿ ಈ ಅತ್ಯಾಶ್ರಮಿ ಶಬ್ದವು ಲಿಂಗಧಾರಿಗಳಾದ ಬ್ರಹ್ಮಚರ್ಯಾದಿ ಸಕಲಾಶ್ರಮ ಸಾಧಾರಣವಾದುದಲ್ಲದೆ ಆಶ್ರಮಗಳನ್ನತಿಕ್ರಮಿಸಿದವರೆಂಬ ಅರ್ಥವಲ್ಲ. ಇಂಥ ವೀರಶೈವ ಅತ್ಯಾಶ್ರಮಧರ್ಮದೀಕ್ಷೆಯನ್ನು ಪಡೆದ ಸರ್ವರೂ ಬ್ರಹ್ಮವಿದ್ಯಾಧಿಕಾರಿಗಳೆಂದು ಸಮರ್ಥಿಸಿ "ಯಾವುದನ್ನು ತಿಳಿದರೆ ಎಲ್ಲವೂ ತಿಳಿಯುವುದೊ" ಎಂಬ ಶೌನಕನ ಪ್ರಶ್ನೆಯನ್ನು ವಿಮರ್ಶಿಸುತ್ತಾ 'ಜಗತ್ತು ಮಿಥ್ಯೆ' ಎಂಬ ಅದ್ವೈತಿಗಳ ವಾದವನ್ನು ಸಯುಕ್ತಿಕವಾಗಿ ನಿರಾಕರಿಸಿರುವುದಲ್ಲದೆ ವೀರಶೈವ ಸಿದ್ಧಾಂತ ಸಮ್ಮತವಾದ "ಭೇದಾಭೇದವಾದ" ಸ್ವರೂಪವನ್ನು ನಿರೂಪಿಸಲಾಗಿದೆ.

ಆಂಗಿರಸನ ಉತ್ತರ—

ಬ್ರಹ್ಮವಿದ್ಯೆಯು ಎರಡು ವಿಧ.

**ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ ಇತಿ ಹಸ್ಮ ಯದ್ಬ್ರಹ್ಮವಿದೋ ವದನ್ತಿ ಪರಾ ಚಾವರಾ ಚ ॥ ೪ ॥**

(ಸಃ) ಆ ಅಂಗಿರಸ ಋಷಿಯು (ತಸ್ಮೈ) ಶರಣಾಗತನಾದ ಶೌನಕನಿಗೆ (ಉವಾಚ ಹ) ಹೀಗೆ ಹೇಳಿದನು—ಎಲೈ ಶೌನಕನೆ, (ಯತ್) ಯಾವ ಪರಶಿವ ಲಿಂಗರೂಪವಾದ ಬ್ರಹ್ಮವನ್ನು ಹೊಂದುವುದಕ್ಕಾಗಿ (ದ್ವೇ ವಿದ್ಯೇ) ಕಾರ್ಯ ಕಾರಣರೂಪವಾದ ಎರಡು ವಿದ್ಯೆಗಳಿವೆಯೊ ಅವನ್ನು (ವೇದಿತವ್ಯೇ) ತಿಳಿಯಬೇಕೆಂದು (ಬ್ರಹ್ಮವಿದಃ) ವೇದಾರ್ಥವನ್ನು ಬಲ್ಲ ಶಿವಾಚಾರ್ಯರು (ವದಂತಿಸ್ಮ ಹ) ಹೇಳುತ್ತಾರೆ. ಆ ಎರಡು ವಿದ್ಯೆಗಳು ಯಾವುವೆಂದರೆ—ಒಂದು (ಪರಾ) ಪರಾ ವಿದ್ಯೆ. ಇನ್ನೊಂದು (ಅವರಾಚ) ಅವರಾವಿದ್ಯೆ. ಪರಾ—ಪಂಚಾಕ್ಷರ ಮಹಾ ಮಂತ್ರರೂಪವಾದ ಕಾರಣವಿದ್ಯೆ. ಅವರಾ—ಋಗ್ವೇದಾದಿ ರೂಪವಾದ ಮುಂದಿನ ಮಂತ್ರದಲ್ಲಿ ಉಕ್ತವಾಗಿರುವ ಕಾರ್ಯವಿದ್ಯೆ.

ಈ ಎರಡು ವಿದ್ಯೆಗಳಲ್ಲಿ ಕಾರಣವಿದ್ಯೆ ಅತಿ ಸೂಕ್ಷ್ಮವಾದುದು. ಅದನ್ನು ಸುಲಭವಾಗಿ ತಿಳಿಯುವುದು ಕಷ್ಟ. ಆದ್ದರಿಂದ ಸ್ಥೂಲಾರುಂಧತೀನ್ಯಾಯ* ದಿಂದ ಕಾರ್ಯರೂಪವಾದ 'ಅಪರಾ' ಎಂಬ ಸ್ಥೂಲವಿದ್ಯೆಯನ್ನು ಮೊದಲು ತಿಳಿಯಬೇಕು.

### ಅಪರವಿದ್ಯೆ ಪರವಿದ್ಯೆ

**ತತ್ರಾಪರಾ ಋಗ್ವೇದೋ ಯಜುರ್ವೇದಃ**
**ಸಾಮವೇದೋಽಥರ್ವವೇದಃ ।**
**ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ**
**ಅಥಪರಾ ಯಯಾ ತದಕ್ಷರಮಧಿಗಮ್ಯತೇ ॥ ೫ ॥**

(ತತ್ರ) ಬ್ರಹ್ಮವಿದ್ಯೆಯೆನಿಸುವ ವೇದವಿದ್ಯೆಯಲ್ಲಿ [ಅಪರಾ] ಷಡಂಗಸಹಿತಗಳಾದ ಋಗ್ವೇದಾದಿಗಳು ನಿಷ್ಕಾಮದಿಂದ ಅನುಷ್ಠಿಸಲ್ಪಟ್ಟು ಮೋಕ್ಷಸಾಧನವಾದ ಧರ್ಮಜ್ಞಾನಕ್ಕೆ ಕಾರಣಗಳಾದ್ದರಿಂದ ಅಪರವಿದ್ಯೆಯೆನಿಸುವುವು. ವೇದ

---

* ಅರುಂಧತೀನಕ್ಷತ್ರ ಅತಿಸೂಕ್ಷ್ಮ. ಸಪ್ತರ್ಷಿಮಂಡಲದಲ್ಲಿ ಅದನ್ನು ಕಾಣುವುದಕ್ಕಾಗಿ ಅದರ ಪಕ್ಕದಲ್ಲಿ ಸ್ಥೂಲವಾಗಿರುವ ವಶಿಷ್ಠನಕ್ಷತ್ರವನ್ನು ಗುರ್ತಿಸಿ ಅರುಂಧತಿಯನ್ನು ಸೂಕ್ಷ್ಮವಾಗಿ ಕಾಣುವುದು ಸರ್ವ ವಿದಿತ.

ಗಳಲ್ಲಿ 'ಅಪರತ್ವ' ವೆಂದರೆ ಪರಂಪರೆಯಿಂದ ಮುಕ್ತಿಸಾಧನ 'ಎಂದು ಅರ್ಥ. (ಶಿಕ್ಷಾ) ವರ್ಣಸ್ವರಾದಿಗಳ ಉಚ್ಚಾರಣ ರೀತಿಯನ್ನು ತೋರಿಸುವ ಶಾಸ್ತ್ರ. (ಕಲ್ಪ) ಅನುಷ್ಠಾನಯೋಗ್ಯವಾದ ಕ್ರಮವನ್ನು ತೋರಿಸುವ ಆಪಸ್ತಂಭಾದಿ ಧರ್ಮಗ್ರಂಥ, ವ್ಯಾಕರಣ, (ನಿರುಕ್ತ) ಪದವಿಭಾಗ ಮಂತ್ರಾರ್ಥದೇವತೆಗಳ ನಿರೂಪಣ ಪ್ರಯೋಜಕಶಾಸ್ತ್ರ. ಛಂದಸ್ಸು, (ಜ್ಯೋತಿಷ) ಕರ್ಮಕಾಂಡೋಕ್ತವಾದ ಕರ್ಮಗಳ ಕಾಲವನ್ನು ವಿಧಿಸುವ ಶಾಸ್ತ್ರ. ವೇದಗಳು ನಾಲ್ಕು. ಅಂಗಗಳು ಆರು. ಇನಿಷ್ಟೂ 'ಅಪರವಿದ್ಯೆ'

(ಅಥ ಪರಾ) ಇನ್ನು ಪರವಿದ್ಯೆ ಯಾವುದೆಂದರೆ–(ಯಯಾ) ಯಾವ ಮಹಾಮಂತ್ರರೂಪವಾದ ಕಾರಣವಿದ್ಯೆಯಿಂದ (ತತ್ ಅಕ್ಷರಂ) ಆ ಪರಶಿವ ಬ್ರಹ್ಮವು (ಅಧಿಗಮ್ಯತೆ) ಸಾಕ್ಷಾತ್ಕರಿಸಲ್ಪಡುವುದೋ ಆ ಪಂಚಾಕ್ಷರೀ ವಿದ್ಯೆಯೇ (ಪರಾ) "ಪರವಿದ್ಯೆ."

ವಿ–'ಮೂಲಂ ವಿದ್ಯಾ ಶಿವಃ ಶೈವಸೂತ್ರಂ ಪಂಚಾಕ್ಷರಸ್ತಥಾ [ಸಿ.ಶಿ.ಪ. ೮-೩೩) 'ಪಂಚಾಕ್ಷರೀಂ ಪರಾವಿದ್ಯಾಂ' (ಶಿ.ಸೂತ್ರ.) ಮುಂತಾದ ಅನೇಕ ಪ್ರಮಾಣಗಳಿಂದ ಪಂಚಾಕ್ಷರೀ ಮಹಾಮಂತ್ರವೇ ಪರಾವಿದ್ಯೆ ಮತ್ತು ಅದು ಕಾರಣ ವಿದ್ಯೆ ಎಂಬುದನ್ನು ಅನೇಕ ಪ್ರಮಾಣಗಳಿಂದ ಈ ಮಂತ್ರಭಾಷ್ಯದಲ್ಲಿ ಸ್ಥಾಪಿಸಿದೆ. ಮೇಲಾಗಿ ಪಂಚಾಕ್ಷರೀ ವಿದ್ಯೆಯು ವೈದಿಕವೆಂದೂ 'ಪಂಚಾಕ್ಷರೀ ಪರಾವಿದ್ಯಾ ಶಿವಜ್ಯೋತಿರವಾಪ್ತಯೇ' ಎಂಬ ಶಿವಾಗಮ ಪ್ರಮಾಣವನ್ನು ನಿರೂಪಿಸಿ ಈ ಮಂತ್ರಕ್ಕೆ ಇತರ ಭಾಷ್ಯಕಾರರು ಮಾಡಿರುವ ವ್ಯಾಖ್ಯಾನಗಳನ್ನು ಸಯುಕ್ತಿಕವಾಗಿ ಖಂಡಿಸಿ ಶಕ್ತಿವಿಶಿಷ್ಟಾದ್ವೈತವನ್ನು ಸಮರ್ಥಿಸಲಾಗಿದೆ. ಕಡೆಯದಾಗಿ ವೇದನಿತ್ಯತ್ವವಿಚಾರ ವಾಕ್ಕಿನ ಪರಾ, ಪಶ್ಯಂತೀ ಮಧ್ಯಮಾ ವೈಖರೀ ಎಂಬ ನಾಲ್ಕು ಪ್ರವೃತ್ತಿಗಳು, ನಿಷ್ಕಾಮಕರ್ಮಗಳ ವೈಶಿಷ್ಟ್ಯ. ಕರ್ಮ ಜ್ಞಾನಗಳ ಸಮತೆ ಮುಂತಾದ ಅನೇಕ ಮಹತ್ವ ವಿಚಾರಗಳು ಈ ಮಂತ್ರಭಾಷ್ಯ ದಲ್ಲಿವಿಸ್ತರಿಸಲ್ಪಟ್ಟವೆ.

## ಪರಶಿವಲಿಂಗಸ್ವರೂಪ

ಲಿಂಗರೂಪಿಯಾದ ಬ್ರಹ್ಮೋಪಾಸನೆಗೆ ಲಿಂಗ ಅಂಗ ಮತ್ತು ಸಾಮರಸ್ಯಜ್ಞಾನಗಳು ಅವಶ್ಯಕವಾದ್ದರಿಂದ ಮೊದಲು ಪರಶಿವಲಿಂಗಸ್ವರೂಪವನ್ನು ಹೇಳುವ ಮಂತ್ರ.

ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣ-
ಮಚಕ್ಷುಃ ಶ್ರೋತ್ರಂ ತದಪಾಣಿಪಾದಮ್ ।
ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ
ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ॥೬॥

(ಯತ್) ಪರವಿದ್ಯೆಯಿಂದ ತಿಳಿಯಲು ಯೋಗ್ಯವಾದ (ತತ್) ಯಾವ ಪರಶಿವ ಲಿಂಗವು (ಅದ್ರೇಶ್ಯಂ) ಅಶುದ್ಧಾಂತಃಕರಣವುಳ್ಳವನಿಂದ ಸಾಕ್ಷಾತ್ಕರಿಸಿ ಕೊಳ್ಳಲು ಅಶಕ್ಯವಾದದ್ದೊ (ಅಗ್ರಾಹ್ಯಂ) ಬಹಿರಿಂದ್ರಿಯ ಅಂತರಿಂದ್ರಿಯ ಗಳಿಂದ ಗ್ರಹಿಸಲು ಅಶಕ್ಯವಾದುದೊ (ಅಗೋತ್ರಂ) ಮನುಷ್ಯರಿಗಿರುವಂತೆ ಗೋತ್ರ (ವಂಶಕ್ರಮ) ವಿಲ್ಲದುದೊ (ಅವರ್ಣಂ) ಬ್ರಾಹ್ಮಣಾದಿ ವರ್ಣಗಳು, ನೀಲಪೀತಾದಿ ಬಣ್ಣಗಳಿಲ್ಲದುದೊ (ಅಚಕ್ಷುಃ ಶ್ರೋತ್ರಂ) ಕಣ್ಣು ಕಿವಿ ಮುಂ ತಾದ ಜಾನೇಂದ್ರಿಯಗಳಿಲ್ಲದುದೊ (ತತ್-ಅಪಾಣಿಪಾದಮ್) ಅದು-ವಾಕ್ಕು ಮುಂತಾದ ಕರ್ಮೇಂದ್ರಿಯಗಳಿಲ್ಲದುದೊ (ನಿತ್ಯಂ) ಕಾಲದಳತೆಯಿಲ್ಲದುದೊ (ವಿಭುಂ) ದೇಶಭೇದ ಕಾಲಭೇದ ವಸ್ತುವಿಭಾಗವಿಲ್ಲದುದೊ (ಸರ್ವಗತಂ) ಸರ್ವಾಂತರ್ಯಾಮಿಯಾದುದೊ (ಸುಸೂಕ್ಷ್ಮಂ) ಅಣುವಿಗಿಂತ ಅಣು (ತತ್ ಅವ್ಯಯಂ) ಅದು-ತ್ರಿಕಾಲಾಬಾಧ್ಯವಾಗಿ (ಯತ್) ಯಾವುದು (ಭೂತ ಯೋನಿಂ) ಶಬ್ದಪ್ರಪಂಚ ಅರ್ಥಪ್ರಪಂಚರೂಪವಾದ ಜಗತ್ತಿಗೆ ಉಪದಾನ ಕಾರಣವಾಗಿರುವುದೊ ಅಂಥ ಪರಶಿವಲಿಂಗವನ್ನು (ಧೀರಾಃ) ಪರವಿದ್ಯಾಕೋವಿ ದರಾದ ಶಿವಯೋಗಿಗಳು (ಪರಿಪಶ್ಯಂತಿ) ಸಾಕ್ಷಾತ್ಕರಿಸಿಕೊಳ್ಳುವರು.

## ಅಕ್ಷರಸೃಷ್ಟಿ.

ಲೋಕದಲ್ಲಿ ಒಂದು ಘಟವಾಗಬೇಕಾದರೆ ಮೃಣ್ಮಯಾದಿ ಉಪಾದಾನ ಕಾರಣಗಳು, ಕುಲಾಲಾ [ಕುಂಬಾರ) ದಿ ನಿಮಿತ್ತ ಕಾರಣಗಳಿರಬೇಕು. ಆದರೆ ಉಪಾದಾನವಾದ ಮೃತ್‌ಕಪಾಲವಿರುವಾಗ ನಿಮಿತ್ತವೆನಿಸಿದ ಕುಲಾಲಾ ದಿಗಳಿರುವುದಿಲ್ಲ. ನಿಮಿತ್ತವಾದ ಕುಲಾಲನಿರುವಾಗ ಕಾರ್ಯವಾದ ಘಟವಿರು ವುದಿಲ್ಲ. ಅಂದಮೇಲೆ ಒಂದು ವಸ್ತುವನ್ನು ತಿಳಿದರೆ ಎಲ್ಲವನ್ನೂ ತಿಳಿಯು ವುದು ಹೇಗೆ ? ಎಂದರೆ—

**ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ**
**ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ;**
**ಯಥಾ ಸತಃ ಪುರುಷಾತ್ ಕೇಶಲೋಮಾನಿ**
**ತಥಾಕ್ಷರಾತ್ ಸಂಭವತೀಹ ವಿಶ್ವಮ್ ‖ ೭ ‖**

(ಯಥಾ) ಹೇಗೆ (ಊರ್ಣನಾಭಿಃ) ಜೇಡಹುಳುವು (ಸೃಜತೇ) ಬೇರೊಂದರ ಅಪೇಕ್ಷೆಯಿಲ್ಲದೆ ಹೊಟ್ಟೆಯೊಳಗೆ ಸಂಕ್ಷಿಪ್ತವಾಗಿರುವ ತಂತುಜಾಲ ಮತ್ತು ತನ್ನ ಇಚ್ಛಾಶಕ್ತಿಯಿಂದ ಹೊರಗೆ ಜಾಲಾಕಾರವಾಗಿರಚಿಸಿ (ಗೃಹ್ಣತೇ) ತನ್ನಲ್ಲಿಯೇ ಅಡಗಿಸಿಕೊಳ್ಳುವುದೊ, (ಯಥಾ) ಗ್ರೀಷ್ಮಕಾಲದಲ್ಲಿ ಭೂಮಿಯಲ್ಲಿಯೇ ಅಡಕವಾಗಿರುವ ತೃಣ ಬೀಜಗಳು ಮಳೆಗಾಲದಲ್ಲಿ [ಪೃಥಿವ್ಯಾಂ] ಭೂಮಿಯಲ್ಲಿ (ಸಂಭವಂತಿ) ಹುಟ್ಟಿ ಬೆಳೆಯುತ್ತವೆಯೊ, (ಯಥಾ) ಹೇಗೆ (ಸತಃ) ಬದುಕಿರುವ (ಪುರುಷಾತ್) ಪುರುಷನಿಂದ (ಕೇಶಲೋಮಾನಿ) ಕೂದಲು ಮತ್ತು ಉಗುರುಗಳು ಹುಟ್ಟುವವೊ, (ತಥಾ) ಅದರಂತೆ (ಅಕ್ಷರಾತ್) ಶಕ್ತಿವಿಶಿಷ್ಟ ಪರಶಿವಬ್ರಹ್ಮದ ದೆಶೆಯಿಂದ (ಇಹ) ಇಲ್ಲಿ (ವಿಶ್ವಂ) ತನ್ನೊಳಗೆ ಅವ್ಯಕ್ತವಾಗಿರುವ ಚರಾಚರ ಪ್ರಪಂಚವು (ಸಂಭವತಿ) ಸೂಕ್ಷ್ಮರೂಪದಿಂದ ಕಾಣಿಸಿಕೊಳ್ಳುತ್ತದೆ.

## ಸೃಷ್ಟಿಕ್ರಮ

ಜೇಡಹುಳುವಿನಿಂದ ಬಲೆ ಹುಟ್ಟುವಂತೆ ಅಕ್ಷರವೆಂಬ ಪರಶಿವಬ್ರಹ್ಮದಿಂದ ಜಗತ್ತು ಹುಟ್ಟಿತು ಎಂಬ ವಿಷಯವನ್ನು ಮುಂದಿನ ಶ್ರುತಿಗಳು ಸಮರ್ಥಿಸುತ್ತವೆ. "ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾಚ ತಸ್ಮಾತ್ ಪ್ರಸೃತಾ ಪುರಾಣೀ" (ಶ್ವೇ. ೪-೧೮) ಸೂರ್ಯನು ಉಪಾಸಿಸುವ ಪರಶಿವಬ್ರಹ್ಮಕ್ಕೆ ಅಕ್ಷರವೆಂದು ಹೆಸರು. ತನ್ನೊಳಗೆ ಲೀನವಾಗಿರುವ ಅಖಿಲಪ್ರಪಂಚವುಳ್ಳ ಈ ಅಕ್ಷರದಿಂದ ಪುರಾತನಪ್ರಜ್ಞಾ (ಇಚ್ಛಾ) ಶಕ್ತಿಯು ಹೊರಟಿತು. "ಅನಾದಿನಿಧನಾತ್ ಶಾಂತಾತ್ ಶಿವಾತ್ ಪರಮ ಕಾರಣಾತ್ । ಇಚ್ಛಾಶಕ್ತಿರ್ವಿನಿಷ್ಕ್ರಾಂತಾ" ಜನನ ಮರಣಗಳಿಲ್ಲದ ಸಿಸೃಕ್ಷುವಾದ ಆ ಪರಶಿವಬ್ರಹ್ಮದಿಂದ ಇಚ್ಛಾಶಕ್ತಿಯು ಆವಿರ್ಭವಿಸಿತು. "ಬಹುಸ್ಯಾಂ ಪ್ರಜಾಯೇಯ" (ತೈ.ಉ.) ನಾನು ಬಹುರೂಪನಾಗುವೆನು. ಎಂಬ ಪರಶಿವಬ್ರಹ್ಮದಿಂದ ಆವಿರ್ಭವಿಸಿದ

ಇಚ್ಛಾ (ವಿಮರ್ಶ) ಶಕ್ತಿಯಿಂದ ನೆನೆದ ಕಡಲೆಯಂತೆ ಆ ಬ್ರಹ್ಮವು ಸೃಷ್ಟಿಗೆ ಉನ್ಮುಖವಾಯಿತು. ಅನಂತರ ಅದು ಈಶಾನಾದಿ ಪಂಚಬ್ರಹ್ಮರೂಪವಾದ ಲಿಂಗಸ್ಥಲವಾಯಿತು. ಆಗ ಹಿಂದಿನ ಮಂತ್ರದಲ್ಲಿ ಸೂಚಿಸಿದಂತೆ ಪುರುಷನಿಂದ ಕೇಶನಖಾದಿಗಳು ಹುಟ್ಟುವಂತೆ ತನ್ನ ವಿಮರ್ಶಶಕ್ತಿಯ ಅಂಶವಾದ ಜಡಮಾಯೆಯುಂಟಾಯಿತು. ಅದು ತನ್ನ ಶಕ್ತ್ಯಂಶದಲ್ಲಿ ಉನ್ಮೇಷ ಹೊಂದಿ ಅಜ್ಞಾನ. ಬಂಧವೆನಿಸಿತು. ಈ ಮಾಯೆಯಲ್ಲಿ ಇಚ್ಛಾಶಕ್ತಿ ಪ್ರತಿಸ್ಫುರಿಸಿತು. ಇದಕ್ಕೆ ಪ್ರಕೃತಿ, ಚಿತ್ತ, ಪ್ರಧಾನವೆಂಬ ಹೆಸರುಗಳುಂಟು. ಪ್ರಕೃತಿತತ್ತ್ವದಿಂದ ಬ್ರಹ್ಮಾಂಡ ಮೊದಲಾದ ವಿಚಿತ್ರ ತನು ಕರಣ ಭುವನ ಭೋಕ್ತೃ ಭೋಗ್ಯರೂಪ ವಿಶ್ವಾಕಾರವಾಗಿ ಆ ಪರಶಿವಬ್ರಹ್ಮವೇ ಪರಿಣಮಿಸಿತು ಎಂಬ ಸೃಷ್ಟಿಕ್ರಮವು ಮುಂದಿನ ಮಂತ್ರದಲ್ಲಿ ಉಕ್ತವಾಗಿದೆ.

**ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।**
**ಅನ್ನಾತ್ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಮ್ ॥**
**॥ ೮ ॥**

(ತಪಸಾ) ಸಂಕಲ್ಪರೂಪವಾದ ಜ್ಞಾನದಿಂದ (ಬ್ರಹ್ಮ) ಅಕ್ಷರವೆಂಬ ಪರಶಿವಬ್ರಹ್ಮವು (ಚೀಯತೆ) ಪಂಚಬ್ರಹ್ಮರೂಪವಾಗಿ ನೆನೆದ ಕಡಲೆಯಂತೆ ಉಬ್ಬುತ್ತದೆ. (ತತಃ) ಜೇಡರಹುಳುವಿನಿಂದ ತಂತುಜಾಲವು ಹುಟ್ಟುವಂತೆ ಸ್ವಾಂಶದಲ್ಲಿ ಆವಿರ್ಭವಿಸಿದ ಅಜ್ಞಾನದಲ್ಲಿ ಪ್ರತಿಸ್ಫುರಿಸಿ ಅದರಿಂದ ತ್ರಿಗುಣಾತ್ಮಕವಾದ (ಅನ್ನಂ) ಪ್ರಕೃತಿಯು (ಅಭಿಜಾಯತೆ) ಆವಿರ್ಭವಿಸುತ್ತದೆ. (ಅನ್ನಾತ್) ಆ ಪ್ರಕೃತಿಯಿಂದ (ಪ್ರಾಣಃ) ಪ್ರಾಣವೂ (ಮನಃ) ಅಂತಃಕರಣವೂ (ಸತ್ಯಂ) ಭೋಕ್ತೃವರ್ಗವೂ (ಲೋಕಾಃ) ಸಪ್ತಲೋಕಗಳೂ ಉತ್ಪನ್ನವಾಗುತ್ತವೆ. (ಚ) ಮತ್ತು (ಕರ್ಮಸು) ಪತಿಕರ್ಮಾಚರಣೆಯಿಂದ ಚಿತ್ತ (ಪ್ರಕೃತಿವಿಶೇಷ)ವು ಪರಿಶುದ್ಧವಾಗುವುದರಿಂದ [ಅಮೃತಂ] ಶಿವತ್ವಪ್ರಾಪ್ತಿ ಎಂಬ ಮೋಕ್ಷವುಂಟಾಗುತ್ತದೆ.

ಈ ಮಂತ್ರೋಕ್ತವಾದ 'ಅಮೃತ' ಪದಕ್ಕೆ ಇತರ ಭಾಷ್ಯಕಾರರು ಬರೆದಿರುವ ಸ್ವರ್ಗ ಮುಂತಾದ ವ್ಯಾಖ್ಯಾನಗಳನ್ನು ಈ ಮಂತ್ರಭಾಷ್ಯದಲ್ಲಿ ಸಂಯುಕ್ತಿಕವಾಗಿ ನಿರಾಕರಿಸಲಾಗಿದೆ.

## ಪರಾವಿದ್ಯೆಯ ಉಪಸಂಹಾರ

ಜೇಡರಹುಳುವಿನ ದೃಷ್ಟಾಂತದಿಂದ ಅಕ್ಷರ ಪರಶಿವಬ್ರಹ್ಮವು ವಿಶ್ವಕ್ಕೆ ಉಪಾದಾನಕಾರಣವೆಂದು ಹೇಳಿಯಾಯಿತು. ಆದರೆ ಜೇಡಹುಳುವಿಗೆ ಅಂಗವುಂಟು. ಅದರಿಂದ ಅದು ಬಲೆಗೆ ಕಾರಣವಾಯಿತು. ಅದರಂತೆ ಬ್ರಹ್ಮಕ್ಕೆ ಅಂಗವಿಲ್ಲ. ಅಂದಮೇಲೆ ಅದು ವಿಶ್ವಕ್ಕೆ ಉಪಾದಾನ ಕಾರಣವಾಗುವುದು ಹೇಗೆ ಎಂದು ಆಶಂಕಿಸಿ ಬ್ರಹ್ಮಕ್ಕೆ ಸರ್ವಜ್ಞತ್ವಾದಿ ಷಡಂಗಗಳುಂಟು. ಎಂಬುದನ್ನು ಮುಂದಿನ ಮಂತ್ರವು ನಿರೂಪಿಸುತ್ತದೆ.

ಯಃ ಸರ್ವಜ್ಞಃ ಸರ್ವವಿತ್ ಯಸ್ಯ ಜ್ಞಾನಮಯಂ ತಪಃ ।
ತಸ್ಮಾದೇತತ್ ಬ್ರಹ್ಮನಾಮ ರೂಪಮನ್ನಂ ಚ ಜಾಯತೇ ॥ ೯ ॥

ಇತಿ ಪ್ರಥಮಮುಂಡಕೇ ಪ್ರಥಮಃ ಖಂಡಃ

(ಸರ್ವವಿತ್) ಸರ್ವಜ್ಞತ್ವಾದಿ ಆರು* ಅಂಗಗಳುಳ್ಳ (ಯಃ) ಯಾವ (ಸರ್ವಜ್ಞಃ) ಪರಶಿವನಿರುವನೋ (ಯಸ್ಯ) ಸರ್ವಜ್ಞತ್ವಾದಿ ಅಂಗಗಳುಳ್ಳ ಯಾವ ಪರಶಿವಬ್ರಹ್ಮಕ್ಕೆ (ಜ್ಞಾನಮಯಂ) ಮುಂದೆ ಹುಟ್ಟುವ ಸರ್ವಪದಾರ್ಥ ಜ್ಞಾನವೆಂಬ ಪ್ರಥಮಾಂಗವೇ (ತಪಃ) ತಪಸ್ಸೋ (ತಸ್ಮಾತ್) ಅಂಥ ಮಹೇಶ್ವರನ ದೆಸೆಯಿಂದ (ಬ್ರಹ್ಮ) ಚಿಚ್ಛಕ್ತಿ ಎಂಬ ಶರೀರವುಳ್ಳ ಲಿಂಗವು (ಜಾಯತೆ) ಆವಿರ್ಭವಿಸುತ್ತದೆ. (ಚ) ಮತ್ತು ಆ ಪರಶಿವಬ್ರಹ್ಮದಿಂದ (ಏತತ್) ಕಾಣುತ್ತಿರುವ (ನಾಮರೂಪಂ) ನಾಮರೂಪುಗಳುಳ್ಳ ಪ್ರಪಂಚವೂ ಮತ್ತು ಇದಕ್ಕೆ ಕಾರಣವಾದ (ಅನ್ನಂ) ಭೇದಬುದ್ಧಿರೂಪವೂ ಮಲರೂಪವೂ ಆದ ಅಜ್ಞಾನವು (ಜಾಯತೆ) ಆವಿರ್ಭವಿಸುತ್ತದೆ.

ಸರ್ವಜ್ಞತ್ವಾದಿ ಅಂಗಳುಳ್ಳ ಅಕ್ಷರ ಪದವಾಚ್ಯವಾದ ಪರಶಿವಬ್ರಹ್ಮದಿಂದ ಚಿದಂಬರ ಶಕ್ತಿರೂಪವುಳ್ಳ ಲಿಂಗವು ಆವಿರ್ಭವಿಸಿತು. ತಾನೇ ತನ್ನ

---

* ಸರ್ವಜ್ಞತಾ ತೃಪ್ತಿರನಾದಿಬೋಧಃ ಸ್ವತಂತ್ರತಾ ನಿತ್ಯಮಲುಪ್ತ ಶಕ್ತಿಃ ।
ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ ಷಡಾಹುರಂಗಾನಿ ಮಹೇಶ್ವರಸ್ಯ ॥
(ಪಾ. ತಂತ್ರ)

ಲೀಲಾವಸ್ಥೆಯಲ್ಲಿ 'ಸ್ವರ್ಣಕುಂಡಲನ್ಯಾಯ'ದಂತೆ* ಜಗದಾಕಾರವಾಗಿ ಪರಿಣಮಿಸಿತು.

ಈ ಮಂತ್ರಭಾಷ್ಯದಲ್ಲಿ ಅನೇಕ ಪ್ರಮಾಣಗಳನ್ನಿತ್ತು ಪ್ರಪಂಚವು ಮಿಥ್ಯೆಯಲ್ಲ; ಕಿಂತು ಸತ್ಯವೆಂಬುದನ್ನು ಸಮರ್ಥಿಸಿ ಭೇದಾಭೇದಸಿದ್ಧಾಂತವನ್ನು ಸ್ಥಾಪಿಸಿದೆ.

ಮೊದಲನೆಯ ಮುಂಡಕದಲ್ಲಿ ಮೊದಲನೆಯ ಖಂಡವು ಮುಗಿದುದು

---

## ದ್ವಿತೀಯಃ ಖಂಡ

### ಮೋಕ್ಷೋಪಯುಕ್ತ ಪತಿಕರ್ಮಗಳು

ಪರಾವಿದ್ಯೆಯು ಲಿಂಗಾಂಗಸಾಮರಸ್ಯ ಮುಕ್ತಿ ಪ್ರತಿಪಾದಕವೆಂಬುದು 'ಕರ್ಮಸು ಚಾಮೃತಂ' ಎಂಬ ಹಿಂದಿನ ಮಂತ್ರದಲ್ಲಿ ಉಕ್ತವಾಗಿದೆ. ಮೋಕ್ಷೋಪಯುಕ್ತವಾದ ಆ ಕರ್ಮವಿಶೇಷಗಳನ್ನು ಎರಡನೆಯ ಖಂಡವು ಪ್ರತಿಪಾದಿಸುತ್ತದೆ.

ತದೇತತ್ಸತ್ಯಮ್; ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯನ್ ।
ತಾನಿ ತ್ರೇತಾಯಾಂ ಬಹುಧಾ ಸಂತತಾನಿ ॥
ತಾನ್ಯಾಚರಥ ನಿಯತಂ ಸತ್ಯಕಾಮಾ
ಏಷ ವಃ ಪಂಥಾಃ ಸುಕೃತಸ್ಯ ಲೋಕೇ ॥ ೧ ॥

(ಮಂತ್ರೇಷು) ವೇದಮಂತ್ರಗಳಲ್ಲಿ (ಯಾನಿ ಕರ್ಮಾಣಿ) ಮೋಕ್ಷಕ್ಕೆ ಉಪಯುಕ್ತವಾದ ಯಾವ ಪತಿಕರ್ಮಗಳನ್ನು (ಕವಯಃ) ತ್ರೇತಾಯುಗದಲ್ಲಿ ಅವತರಿಸಿದ್ದ ಏಕವಕ್ತ್ರ ಮೊದಲಾದವರೂ ಕಲಿಯುಗದಲ್ಲಿ ಅವತರಿಸಿದ ರೇಣು

---

* ಸುವರ್ಣವು ಕರ್ಣಕುಂಡಲ ಮೊದಲಾದ ಆಭರಣಗಳಾಗಿ ಪರಿಣಾಮ ಹೊಂದುತ್ತದೆ. ಅಂದರೆ ಅದು ಸುವರ್ಣತ್ವವನ್ನು ಕಳೆದುಕೊಳ್ಳದೆ ಬೇರೆ ನಾಮರೂಪಗಳನ್ನು ತಳೆಯುವುದು.

ಕಾಚಾರ್ಯ ಮೊದಲಾದ ಪ್ರಸಾದಮುಕ್ತರೂ (ಅಪಶ್ಯನ್) ಶಿವಸಾಕ್ಷಾತ್ಕಾರ ಪಡೆದರೋ; ಅಂಥ (ತಾನಿ) ಪತಿಕರ್ಮಗಳನ್ನು (ತ್ರೇತಾಯಾಂ) ತ್ರೇತಾಯುಗದಲ್ಲಿ (ಬಹುಧಾ) ಅನೇಕಪ್ರಕಾರವಾಗಿ ಕಶ್ಯಪಾದಿ ಋಷಿಗಳು, ದೇವದಾನವ ಮಾನವಾದಿಗಳು (ಸಂತತಾಸಿ) ನಿತ್ಯವೂ ಅನುಷ್ಠಾನಮಾಡುತ್ತಿದ್ದರು. (ತದೇತತ್) ಹೀಗೆ ಉಪಾಸನಾಸಕ್ತರಾಗಿದ್ದರೆಂಬುದು (ಸತ್ಯಂ) ಯಥಾರ್ಥವೇ ಆಗಿದೆ. (ತಾನಿ) ವೇದವೇದಾಂತಾಗಮ ವಿಹಿತಗಳಾದ ಪತಿಕರ್ಮಗಳನ್ನು (ನಿಯತಂ) ವಿಧ್ಯುಕ್ತವಾಗಿ (ಆಚರಥ) ನೀವು ಆಚರಿಸಿರಿ. (ಸತ್ಯಕಾಮಾಃ) ಮುಮುಕ್ಷುಗಳಾದ ಎಲೈ ಶಿಷ್ಯರೆ, (ಸುಕೃತಸ್ಯ) ಜ್ಞಾನಸಹಿತ ಪತಿಕರ್ಮಗಳಿಗೆ ಫಲರೂಪವಾದ (ಲೋಕೇ) 'ಲೋಕ್ಯತೇ ಅನುಭೂಯತೆ ಇತಿ ಲೋಕಃ' ಎಂಬ ವ್ಯುತ್ಪತ್ತಿಯಿಂದ ಮುಕ್ತರಿಂದ ಅನುಭವಿಸಲ್ಪಡುವ ಶಿವತ್ವಪ್ರಾಪ್ತಿರೂಪವಾದ ಸಾಧನೆಯಲ್ಲಿ (ಏಷಃ) ಹೀಗೆ ಲಿಂಗಾಂಗಸಾಮರಸ್ಯಕ್ಕೆ ಅನುಕೂಲವಾದ ಪಂಚಾಚಾರ ಅಷ್ಟಾವರಣರೂಪವಾದ ಈ ಶಿವಲಿಂಗೋಪಾಸನೆಯು ನಿಮಗೆ (ಪಂಥಾಃ) ಮೋಕ್ಷಕ್ಕೆ ಉಪಾಯವು.

## ಪಶುಕರ್ಮ ನಿರಾಸ

ಹೀಗೆ ಮೋಕ್ಷಕ್ಕೆ ಉಪಯುಕ್ತವಾದ ಪತಿಕರ್ಮಗಳನ್ನು ವಿಧಿಸಿದಮೇಲೆ "ದ್ವೇವಿದ್ಯೇ ವೇದಿತವ್ಯೇ" ಎಂಬ ವಿಧಿವಾಕ್ಯದಲ್ಲಿ ಉಕ್ತವಾದ ಋಗ್ವೇದಾದಿ ಅಪರವಿದ್ಯೆಯೂಕೂಡ ಬ್ರಹ್ಮಪ್ರಾಪ್ತಿಗೆ ಸಾಧನವೆಂದು ಸಿದ್ಧವಾಯಿತು ಆದರೆ ವೇದೋಕ್ತವಾದ ಅಗ್ನಿಹೋತ್ರಾದಿ ಎಲ್ಲ ಕರ್ಮಗಳೂ ಮುಮುಕ್ಷುಗಳಿಗೆ ಆವಶ್ಯಕವೆ ? ಎಂಬ ಸಂದೇಹವನ್ನು ಕಳೆಯುವುದಕ್ಕಾಗಿ 'ಮಂತ್ರೇಷು ಕರ್ಮಾಣಿ' ಎಂಬಲ್ಲಿರುವ ಕರ್ಮಪದಕ್ಕೆ ಕೇವಲ 'ಪತಿಕರ್ಮ' ಎಂದು ಅರ್ಥ ಮಾಡಿರುತ್ತಾರೆ. ಆದರೂ ಇಲ್ಲಿರುವ ಕರ್ಮಪದಕ್ಕೆ ಹಾಗೆ ಅರ್ಥಸಂಕೋಚ ಮಾಡುವುದು ಅನುಚಿತವಲ್ಲವೆ ? ಎಂದು ಸಂದೇಹಿಸಿ ಶ್ರುತಿಯು ಅಗ್ನಿಹೋತ್ರಾದಿ ಪಶುಕರ್ಮಗಳು ಮತ್ತು ಅವುಗಳ ಅಸ್ಥಿರಫಲಗಳನ್ನು ತಿರಸ್ಕರಿಸುತ್ತಾ ಮುಮುಕ್ಷುಗಳು ಇಂಥ ಜೀವಭಾವವಳಿಯದ ಪಶುಕರ್ಮಗಳನ್ನು ಮಾಡಬಾರದೆಂದು ಬೋಧಿಸುತ್ತದೆ.

ಯದಾಲೇಲಾಯತೇಹ್ಯರ್ಚಿಃ

ಸಮಿದ್ಧೇ ಹವ್ಯವಾಹನೇ ।

ತದಾಜ್ಯಭಾಗಾವಂತರೇಣಾಹುತೀಃ

ಪ್ರತಿಪಾದಯೇತ್ ಶ್ರದ್ಧಯಾ ಹುತಮ್ ॥ ೨ ॥

(ಯದಾ) ಯಾವಾಗ (ಹವ್ಯವಾಹನೇ) ಅಗ್ನಿಯು (ಸಮಿದ್ಧೇ ಸತಿ) ಸಮಿತ್ತು ಮೊದಲಾದವುಗಳಿಂದ ಪ್ರಜ್ವಲಿಸುತ್ತಿರಲು (ಅರ್ಚಿಃ) ಅಗ್ನಿಶಿಖೆಯು (ಲೇಲಾಯತೆ) ಚಲಿಸುತ್ತಿರುವುದೊ (ತದಾ ಹಿ) ಅದೇ ಕಾಲದಲ್ಲಿ (ಆಜ್ಯಭಾಗೌ ಅಂತರೇಣ) ಆಜ್ಯಭಾಗಗಳ ಮಧ್ಯದಲ್ಲಿ (ಆಹುತೀಃ) ಆಹುತಿಗಳನ್ನು (ಪ್ರತಿಪಾದಯೇತ್) ಹಾಕಿದಪಕ್ಷದಲ್ಲಿ, ಆಗ (ತದೇತತ್) ಅಂಥ ಹೋಮಕರ್ಮವು (ಶ್ರದ್ಧಯಾ ಹುತಂ) ಶ್ರದ್ಧೆಯಿಂದ ಮಾಡಿದಂತಾಗುವುದು.

## ಪಶುಕರ್ಮದ ಫಲ

ಯಸ್ಯಾಗ್ನಿಹೋತ್ರಮದರ್ಶಮಪೌರ್ಣಮಾಸ-

ಮಚಾತುರ್ಮಾಸ್ಯಮನಾಗ್ರಯಣಮತಿಥಿವರ್ಜಿತಂ ಚ ।

ಅಹುತಮವೈಶ್ವದೇವಮವಿಧಿನಾ ಹುತ-

ಮಾಸಪ್ತಮಾಂಸ್ತಸ್ಯ ಲೋಕಾನ್ ಹಿನಸ್ತಿ ॥ ೩ ॥

(ಯಸ್ಯ) ಯಾವ ಅಗ್ನಿಹೋತ್ರಿಯ (ಅಗ್ನಿಹೋತ್ರಂ) ಅಗ್ನಿಹೋತ್ರವೆಂಬ ಕರ್ಮವಿದೆಯೋ ಅದು (ಅದರ್ಶಂ) ಅಮಾವಾಸ್ಯೆ ಕಾಲದಲ್ಲಿ ಮಾಡಬೇಕಾದ ಯಾಗಕರ್ಮವಲ್ಲದುದೂ (ಅಪೌರ್ಣಮಾಸಂ) ಪೂರ್ಣಿಮಾ ದಿವಸ ಮಾಡಬೇಕಾದ ದೇವತೋದ್ದೇಶದಿಂದ ದ್ರವ್ಯತ್ಯಾಗರೂಪವಾದ ಯಾಗವಿಲ್ಲದುದೂ,(ಅಚಾತುರ್ಮಾಸ್ಯಂ) ಆಷಾಢ,ಶ್ರಾವಣ,ಭಾದ್ರಪದ, ಮತ್ತು ಆಶ್ವಯುಜಮಾಸಗಳಲ್ಲಿ ಮಾಡಬೇಕಾದ ವ್ರತವಲ್ಲದುದೂ, (ಅನಾಗ್ರಯಣಂ) ಶರತ್ಕಾಲದಲ್ಲಿ ಮಾಡುವ ಆಗ್ರಯಣ ಕರ್ಮವಲ್ಲದುದೂ, (ಅತಿಥಿವರ್ಜಿತಂ) ಅತಿಥಿಸತ್ಕಾರವಿಲ್ಲದುದೂ, (ಅಹುತಂ) ಹೋಮವಲ್ಲದುದೂ,(ಅವೈಶ್ವದೇವಂ) ವೈಶ್ವದೇವಪೂಜಾ ಕರ್ಮಾನುಷ್ಠಾನವಲ್ಲದುದೂ (ಅವಿಧಿನಾ ಹುತಂ) ವಿಧ್ಯುಕ್ತವಾಗಿ

ಆಹವನೀಯಾಗ್ನಿಯಲ್ಲಿ ದ್ರವ್ಯತ್ಯಾಗರೂಪವಾದ ಹೋಮಮಾಡದುದೂ ಆದರೆ (ತಸ್ಯ) ಆ ಅಗ್ನಿಹೋತ್ರಿಗೆ ಫಲರೂಪಗಳಾದ (ಆಸಪ್ತಮಾನ್ ಲೋಕಾನ್) ಭೂಃಭುವಃ ಸುವಃ ಮಹಃ ಜನಃ ತಪಃ ಸತ್ಯವೆಂಬ ಏಳುಲೋಕಗಳನ್ನು(ಹಿನಸ್ತಿ) ನಾಶಗೊಳಿಸುವುದು.

ಎಂದರೆ ಅಗ್ನಿಹೋತ್ರಾದಿ ಯಾಗಕರ್ಮಗಳನ್ನು ವಿಧ್ಯುಕ್ತವಾಗಿ ಅನುಷ್ಠಾನಮಾಡಿದರೆ ಆಯಾಯ ಯಜ್ಞಕರ್ಮಾನುಗುಣವಾಗಿ ಭೂ ಮೊದಲಾದ ಏಳು ಲೋಕಗಳೂ ದೊರೆಯುತ್ತವೆ. ಹಾಗೆ ಮಾಡದಿದ್ದರೆ ಕರ್ತನಿಗೆ ಅವು ದೊರೆಯುವುದಿಲ್ಲ.

ಕಾಳೀ ಕರಾಳೀ ಚ ಮನೋಜವಾ ಚ
ಸುಲೋಹಿತಾ ಯಾ ಚ ಸುಧೂಮ್ರ ವರ್ಣಾ ।
ಸ್ಫುಲಿಂಗಿನೀ ವಿಶ್ವರೂಪೀ (ರುಚೀ) ಚ ದೇವೀ
ಲೇಲಾಯಮಾನಾ ಇತಿ ಸಪ್ತಜಿಹ್ವಾಃ ॥ ೪ ॥

ಅಗ್ನಿಗೆ 'ಸಪ್ತಜಿಹ್ವಾ' ಎಂಬ ಹೆಸರಿದೆ. ಈ ಮಂತ್ರದಲ್ಲಿ ಅಗ್ನಿಗಿರುವ ಏಳು ಜಿಹ್ವೆಗಳ ಹೆಸರುಗಳು ಉಕ್ತವಾಗಿವೆ. ಅವು ಕ್ರಮವಾಗಿ ಕಾಳೀ, ಕರಾಳೀ ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ ವಿಶ್ವರೂಪೀ ಎಂಬವು. ಇಲ್ಲಿರುವ 'ದೇವಿ' ಎಂಬ ಪದವು 'ವಿಶ್ವರೂಪೀ' ಎಂಬುದಕ್ಕೆ ವಿಶೇಷಣ.

ಏತೇಷು ಯಶ್ಚರತೇ ಭ್ರಾಜಮಾನೇಷು
ಯಥಾಕಾಲಂ ಚಾಹುತಯೋ ಹ್ಯಾದದಾಯನ್ ।
ತಂ ನಯಂತ್ಯೇತಾಃ ಸೂರ್ಯಸ್ಯರಶ್ಮಯೋ
ಯತ್ರ ದೇವಾನಾಂ ಪತಿರೇಕೋಽಧಿವಾಸಃ ॥ ೫ ॥

(ಏತೇಷು) ಈ ಏಳು ಜಿಹ್ವೆಗಳು (ಭ್ರಾಜಮಾನೇಷುಸತ್ಸು) ಪ್ರಜ್ವಲಿಸುತ್ತಿರಲು (ಯಥಾಕಾಲಂ) ಯಾವ ಕರ್ಮಕ್ಕೆ ಯಾವ ಕಾಲದಲ್ಲಿ ಅನುಷ್ಠಾನಮಾಡಬೇಕೋ ಅಂಥ ವಿಹಿತಕಾಲವನ್ನು ಮೀರದೆ (ಆದದಾಯನ್) ಹೋಮದ್ರವ್ಯವನ್ನು ತೆಗೆದುಕೊಂಡು (ಯಃ) ಯಾವನು (ಚರತಿ) ಅಗ್ನಿಹೋತ್ರಾದಿ ಕರ್ಮ

ವನ್ನು ಆಚರಿಸುತ್ತಾನೆಯೋ ಅಂತಹ (ತಂ) ಯಜಮಾನನನ್ನು (ಆಹುತಯಃ) ಆಜ್ಯಾದಿ ಆಹುತಿದ್ರವ್ಯಗಳು (ಸೂರ್ಯಸ್ಯರಶ್ಮಯಃ ಭೂತ್ವಾ) ಸೂರ್ಯಕಿರಣಗಳಾಗಿ (ಯತ್ರ) ಯಾವ ಸತ್ಯಲೋಕದಲ್ಲಿ (ಅಧಿವಾಸಃ) ವಾಸಿಸುತ್ತಿರುವ (ಏಕಃ) ಮುಖ್ಯವಾದ (ದೇವಾನಾಂ ಪತಿಃ) ದೇವತಾಧಿಪತಿಯಾದ ಚತುರ್ಮುಖ ಬ್ರಹ್ಮನಿರುವನೋ ಆ ಲೋಕವನ್ನು (ನಯಂತಿ) ಹೊಂದಿಸುತ್ತವೆ.

ಏಹ್ಯೇಹೀತಿ ತಮಾಹುತಯಸ್ಸುವರ್ಚಸಃ
ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹನ್ತಿ ।
ಪ್ರಿಯಾಂ ವಾಚಮಭಿವದನ್ತ್ಯೋಽರ್ಚಯನ್ತ್ಯ
ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ॥ ೬ ॥

(ಆಯತಯಃ) ಹೂಯಮಾನಗಳಾದ ಆ ಆಹುತಿಗಳು (ಏಹಿ ಏಹಿ ಇತಿ) ಎಲೈ ಪುಣ್ಯಶೀಲನೆ, ಬಾ ಬಾ ಎಂದು (ಆಹ್ವಯಂತ್ಯಃ) ಕರೆಯುತ್ತಾ (ಸೂರ್ಯರಶ್ಮಿಭಿಃ) ಸೂರ್ಯಕಿರಣಗಳಿಂದ ಕೂಡಿರುವುದರಿಂದಲೇ (ಸುವರ್ಚಸಃ) ಅತ್ಯಂತ ಪ್ರಜ್ವಲಿಸುತ್ತಾ (ತಂ) ಆ ಯಜಮಾನನನ್ನು (ಅರ್ಚಯಂತ್ಯಃ) ಸನ್ಮಾನಿಸುತ್ತಾ (ಏಷ) ಇದಿಗೊ (ವಃ) ನಿನ್ನ (ಪುಣ್ಯಃ) ಪವಿತ್ರವಾದ (ಸುಕೃತಃ) ಸುಕೃತದಿಂದ ದೊರೆತ (ಬ್ರಹ್ಮಲೋಕಃ) ಸತ್ಯಲೋಕವು ಎಂದು (ಪ್ರಿಯಾಂ) ಇಷ್ಟವಾದ (ವಾಚಂ) ಮಾತನ್ನು (ವದಂತ್ಯಃ) ಹೇಳುತ್ತಾ ಆ ಕರ್ತನನ್ನು (ವಹಂತಿ) ಆ ಬ್ರಹ್ಮಲೋಕವನ್ನು ಹೊಂದಿಸುತ್ತವೆ.

## ಪಶುಕರ್ಮನಿಂದೆ

ಭೂರಾದಯಸ್ತ್ರಯೋ ಲೋಕಾಸ್ಸಪಾತಾಲಸ್ಸಹಾರ್ಣವಾಃ । ಬ್ರಹ್ಮಣೋ ದಿನಪರ್ಯಂತೇ ಸಂಹ್ರಿಯಂತೇ ಪುನಃ ಪುನಃ ॥ ಆಹಾರಾದೌ ಚ ಸೃಜ್ಯಂತೇ ಯಥಾಪೂರ್ವಂ ಮುಹುರ್ಮುಹುಃ । ಜನಲೋಕಾದಯಸ್ಸರ್ವೇ ಲೀಯಂತೇ ಬ್ರಹ್ಮಣಃ ಕ್ಷಯೇ" (ಶಿವತತ್ತ್ವರತ್ನಾಕರ) ಎಂಬ ಉಕ್ತಿಯಂತೆ ಅಗ್ನಿಹೋತ್ರಾದಿ ಕರ್ಮಗಳನ್ನು ಅನುಷ್ಠಾನಮಾಡುವುದರಿಂದ ಬ್ರಹ್ಮಲೋಕಗಳು ದೊರೆತರೂ ಅವು ನಶ್ವರಗಳು. ಆದ್ದರಿಂದ ಅಂಥ ಲೋಕಗಳ ಪ್ರಾಪ್ತಿಗಾಗಿ ಮಾಡುವ ಅಗ್ನಿಹೋತ್ರಾದಿ ಕರ್ಮಗಳನ್ನು ಈ ಮಂತ್ರವು ಪಶುಕರ್ಮಗಳೆಂದು ನಿಂದಿಸುತ್ತದೆ.

ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ
ಅಷ್ಟಾದಶೋಕ್ತಮವರಂ ಯೇಷು ಕರ್ಮ ।
ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ
ಜರಾ ಮೃತ್ಯುಂ ತೇ ಪುನರೇವಾಪಿ ಯಂತಿ ॥ ೭ ॥

(ಅಷ್ಟಾದಶೋಕ್ತಂ)ಹದಿನಾರು ಮಂದಿ ಋತ್ವಿಜರು ಮತ್ತು ಯಜಮಾನ ದಂಪತಿಗಳು ಸೇರಿ ಒಟ್ಟು ಹದಿನೆಂಟು ಕರ್ತೃಗಳೊಡಗೂಡಿ ಮಾಡುವ (ಅವರಂ) ಪಾಶಾಶ್ರಯವಾದ್ದರಿಂದ ಶ್ರೇಷ್ಠವಲ್ಲದ (ಕರ್ಮ) ಪಶುಕರ್ಮವು (ಯೇಷು) ಯಾವ ಯಜಮಾನನಲ್ಲಿರುವುದೊ (ಏತೇಯಜ್ಞರೂಪಾಃ) ಅಂಥ ಈ ಯಜ್ಞ ಕರ್ತರಾದ ಪುರುಷರು (ಅದೃಢಾಃ) ಜೀರ್ಣವಾದ (ಪ್ಲವಾಃ) ಸಣ್ಣ ನೌಕೆ ಗಳಂತೆ ಸಂಸಾರಸಾಗರವನ್ನು ದಾಟುವುದಕ್ಕೆ ಅಸಮರ್ಥರು. ಆದರೂ (ಯೇ) ಯಾರು (ಏತತ್) ಈ ಪಶುಕರ್ಮವೇ (ಶ್ರೇಯಃ) ಶ್ರೇಯಸ್ಕರವೆಂದು (ಅಭಿ ನಂದಂತಿ) ಸಂತೋಷಪಡುತ್ತಾರೆಯೊ (ತೇ) ಅಂಥವರು (ಮೂಢಾಃ) ಅವಿವೇ ಕಿಗಳು. ಆದ್ದರಿಂದಲೇ ಅವರು (ಪುನರೇವ) ದೇಹಾವಸಾನದಲ್ಲಿ ಲಿಂಗಶರೀರ ಸಹಿತ ಅರ್ಚಿರಾದಿ ಮಾರ್ಗದಿಂದ ಗಮಿಸಿ ಅಲ್ಲಲ್ಲಿ ಆತಿವಾಹಿಕಪುರುಷರಿಂದ ಸನ್ಮಾನಿತರಾಗಿ ಮತ್ತೆ ಮತ್ತೆ (ಜರಾಮೃತ್ಯುಂ) ಜನನಮರಣಗಳನ್ನು (ಅಪಿ ಯಾಂತಿ) ಹೊಂದುತ್ತಾರೆ.

ಅಥವಾ

(ಅಷ್ಟಾದಶೋಕ್ತಂ) ನಾಲ್ಕುವೇದಗಳು, ಆರುಶಾಸ್ತ್ರಗಳು, ಮೀಮಾಂಸೆ, ನ್ಯಾಯ, ಪುರಾಣ, ಧರ್ಮಶಾಸ್ತ್ರ, ಆಯುರ್ವೇದ, ಧನುರ್ವೇದ, ಗಾಂಧರ್ವ ವೇದ, ಅರ್ಥಶಾಸ್ತ್ರ ಎಂಬ ಹದಿನೆಂಟು ವಿದ್ಯೆಗಳಿಗೆ ಆಶ್ರಯವಾದ ವೇದಗಳಲ್ಲಿ ಉಕ್ತವಾದ (ಅವರಂಕರ್ಮ) ಪುನರಾವೃತ್ತಿರೂಪ ಕ್ಷಣಿಕ ಫಲವನ್ನು ಕೊಡುವ ಪಶುಕರ್ಮವು (ಯೇಷು) ಯಾವ ಯಜಮಾನನಲ್ಲಿ ಅನುಷ್ಠಾನದಲ್ಲಿರುವುದೊ, (ಏತತ್) ಅಂಥ ಪಶುಕರ್ಮವೇ (ಶ್ರೇಯಃ) ಶ್ರೇಯಸ್ಕರವೆಂದು (ಯೇ) ಯಾರು (ಅಭಿನಂದಂತಿ) ಸಂತುಷ್ಟರಾಗುವರೋ (ತೇ ಏತೇ ಮೂಢಾಃ) ಅಂಥ ಮೂಢರು (ಯಜ್ಞರೂಪಾಃ) ಯಜ್ಞದಂತೆ (ಅದೃಢಾಃ) ಚಂಚಲವಾದ (ಪ್ಲವಾ) ಕಪಿಗಳಂತೆ ಸ್ಥೈರ್ಯವಿಲ್ಲದವರಾಗಿ ಶಿವಲಿಂಗಧ್ಯಾನಧಾರಣಾದಿಗಳಿಲ್ಲ

ದಿರುವುದರಿಂದ ತುಚ್ಛ ಫಲವನ್ನು ಪಡೆಯುವ ಪಶುಕರ್ಮಿಗಳು (ಪುನರೇವ) ಮತ್ತೆಮತ್ತೆ (ಜರಾಮೃತ್ಯುಂ) ಜನನಮರಣಗಳನ್ನು (ಅಪಿಯಂತಿ) ಹೊಂದುತ್ತಾರೆ.

ಮೂಲದಲ್ಲಿರುವ 'ಪ್ಲವ' ಶಬ್ದಕ್ಕೆ "ಉಡುಪೇ ವಾನರೇ ಭೇಕೇ ಪ್ಲವೇ ಕಾರಂಡವಃ ಪ್ಲವಃ" ಎಂಬ ಕೋಶಾರ್ಥವನ್ನು ಅನುಸರಿಸಿ ಭಾಷ್ಯಕಾರರು ಎರಡನೆಯ ವ್ಯಾಖ್ಯಾನವನ್ನು ಸ್ವಾರಸ್ಯವಾಗಿ ಬರೆದಿದ್ದಾರೆ.

ಅವಿದ್ಯಾಯಾಮಂತರೇ ವರ್ತಮಾನಾಃ
ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।
ಜಂಘನ್ಯಮಾನಾಃ ಪರಿಯಂತಿ ಮೂಢಾಃ
ಅಂಧೇನೈವ ನೀಯಮಾನಾ ಯಥಾಂಧಾಃ ॥ ೮ ॥

(ಅವಿದ್ಯಾಯಾಂ ಅಂತರೇ) ಕ್ಲೇಶಕ್ಕೆ ಮೂಲವಾದ ಅವಿದ್ಯೆಯಲ್ಲಿ (ವರ್ತಮಾನಾಃ) ಇರುವ (ಮೂಢಾಃ) ಅವಿವೇಕಿಗಳು (ಸ್ವಯಂಧೀರಾಃ) ತಮ್ಮಷ್ಟಕ್ಕೆ ತಾವೇ ಬುದ್ಧಿಶಾಲಿಗಳೆಂದೂ (ಪಂಡಿತಂ ಮನ್ಯಮಾನಾಃ) ತಮ್ಮನ್ನು ಪಂಡಿತರೆಂದೂ ತಿಳಿದವರಾಗಿ (ಅಂಧೇನೈವ) ಕುರುಡನಿಂದ (ನೀಯಮಾನಾಃ) ಒಯ್ಯಲ್ಪಡುವ (ಯಥಾಂಧಾಃ) ಕುರುಡರಂತೆ ಕಲ್ಲುಮುಳ್ಳುಗಳಿಂದ (ಜಂಘನ್ಯಮಾನಾಃ) ಅತ್ಯಂತ ತೊಂದರೆಪಡುತ್ತಾ (ಪರಿಯಂತಿ) ಸಂಸಾರಚಕ್ರದಲ್ಲಿ ಸುತ್ತುವರು.

ಅವಿದ್ಯಾಯಾಂ ಬಹುಧಾ ವರ್ತಮಾನಾಃ
ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ ।
ಯತ್ಕರ್ಮಿಣೋ ನಪ್ರವೇದಯಂತಿ ರಾಗಾತ್
ತೇನಾತುರಾಃ ಕ್ಷೀಣಲೋಕಾಶ್ಚ್ಯವಂತೇ ॥ ೯ ॥

(ಅವಿದ್ಯಾಯಾಂ) ಅವಿದ್ಯೆಯಲ್ಲಿ (ಬಹುಧಾ) ಅನೇಕಪ್ರಕಾರವಾಗಿ (ವರ್ತಮಾನಾಃ) ಇದ್ದರೂ (ವಯಂ ಕೃತಾರ್ಥಾ ಇತಿ) ನಾವೇ ಕೃತಕೃತ್ಯರೆಂದು (ಅಭಿಮನ್ಯಂತಿ) ಅಭಿಮಾನಿಸಿಕೊಳ್ಳುತ್ತಾರೆ. (ಬಾಲಾಃ) ಅಜ್ಞಾನಿಗಳು (ಯತ್) ಯಾವಕಾರಣದಿಂದ (ಕರ್ಮಿಣಃ) ಪಶುಕರ್ಮಫಲದಲ್ಲಿ (ರಾಗಾತ್)

ಅನುರಾಗವನ್ನಿಟ್ಟುಕೊಂಡು [ನ ಪ್ರವೇದಯಂತಿ] ಲಿಂಗಧಾರಣದೀಕ್ಷೆಯಿಲ್ಲದ್ದರಿಂದ ಶಾಶ್ವತಫಲಪ್ರದವಾದ ಶಿವತತ್ತ್ವವನ್ನು ತಿಳಿಯುವುದಿಲ್ಲವೋ [ತೇನ] ಅದೇ ಕಾರಣದಿಂದ [ಆತುರಾಃ] ವ್ಯಾಕುಲಮನಸ್ಸುಳ್ಳವರಾಗಿ [ಕ್ಷೀಣಲೋಕಾಃ] ಪಶುಕರ್ಮದಿಂದ ದೊರೆಯುವ ಕ್ಷಣಿಕಫಲಪ್ರದಗಳಾದ ಸ್ವರ್ಗಾದಿಗಳಿಂದ [ಚ್ಯವಂತೆ] ಕರ್ಮಫಲವು ಮುಗಿದ ಬಳಿಕ ಶೇಷಕರ್ಮಸಹಿತರಾಗಿ ಹೋದ ಮಾರ್ಗದಿಂದಲೇ ಬಂದು ಪುನಃ ಜನ್ಮಗಳನ್ನೆತ್ತುತ್ತಾರೆ.

ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ
ನಾನ್ಯತ್ ಶ್ರೇಯೋ ವೇದಯನ್ತೇ ಪ್ರಮೂಢಾಃ ।
ನಾಕಸ್ಯ ಪೃಷ್ಠೇ ಸುಕೃತೇಽನುಭೂತ್ವಾ
ಇಮಂ ಲೋಕಂ ಹೀನತರಂ ವಾ[ಚ] ವಿಶಂತಿ ॥ ೧೦ ॥

[ಇಷ್ಟಾಪೂರ್ತಂ] ಇಷ್ಟ–ಯಾಗಾದಿಕರ್ಮಗಳು, ಪೂರ್ತ–ಭಾವಿ ಕೆರೆ ಕೊಳ ಮುಂತಾದ ಕರ್ಮಗಳು "ತ್ರಿಷ್ವಥಕ್ರತುಕರ್ಮೇಷ್ಟಂ ಪೂರ್ತಂ ಖಾತಾದಿಕರ್ಮ ಚ–ಅಮರ" ಇವುಗಳೇ [ವರಿಷ್ಠಂ] ಶ್ರೇಯಸ್ಕರವೆಂದು [ಮನ್ಯಮಾನಾಃ] ತಿಳಿದು [ಅನ್ಯತ್] ಮೇಲೆ ಹೇಳಿದ ಇಷ್ಟಾಪೂರ್ತಗಳಿಗೆ ಬೇರೆಯಾದ [ವರಿಷ್ಠಂ] ಶ್ರೇಷ್ಠವಾದ ಪತಿಕರ್ಮವು [ಶ್ರೇಯಃ] ವಸ್ತುತಃ ಸ್ಥಿರಫಲಪ್ರದವಾದ್ದರಿಂದ ಶ್ರೇಯಸ್ಕರವಾಗಿದ್ದರೂ ಅದನ್ನು [ನ ವೇದಯಂತೇ] ಶ್ರೇಷ್ಠವೆಂದು ತಿಳಿಯುವುದಿಲ್ಲ. [ತೇ ಪ್ರಮೂಢಾಃ] ಇಂಥ ಪತಿಕರ್ಮಗಳ ಸ್ವರೂಪವನ್ನು ತಿಳಿಯದಿರುವ ಮೂಢರು [ನಾಕಸ್ಯ ಪೃಷ್ಠೇ] ಸ್ವರ್ಗದಲ್ಲಿ [ಸುಕೃತೇ] ತಮ್ಮ ಪುಣ್ಯಫಲವನ್ನು [ಅನುಭೂತ್ವಾ] ಅನುಭವಿಸಿ, ಪುಣ್ಯವು ಮುಗಿಯಲು [ಇಮಂ ಲೋಕಂ] ಈ ಮರ್ತ್ಯಲೋಕವನ್ನಾಗಲಿ [ವಾ] ಅಥವಾ [ಹೀನತರಂ] ಇದಕ್ಕಿಂತಲೂ ಹೀನವಾದ ನರಕಾದಿ ಲೋಕಗಳನ್ನಾಗಲಿ [ವಿಶಂತಿ] ಪ್ರವೇಶಿಸುತ್ತಾರೆ.

### ಪತಿಕರ್ಮ ಮತ್ತು ಉಪಾಸನೆಗಳ ಫಲ

"ಹಿಂಸಾದಿದೋಷಮುಕ್ತತ್ವಾತ್ ವಿಶುದ್ಧಶ್ಚಿತ್ತಸಾಧನಃ" ಧ್ಯಾನಯಜ್ಞಃ ಪರಃ ತಸ್ಮಾತ್ ಅಪವರ್ಗಫಲಪ್ರದಃ "ತಸ್ಮಾದಶುದ್ಧಂ ಸ್ವರ್ಗೀಯ

ಪನಿತ್ಯಂ ಬಾಹ್ಯಸಾಧನಂ। ಯಜ್ಞಾದ್ಯ ಕರ್ಮ ಸಂತ್ಯಜ್ಯ ಯೋಗಂ ಮುಕ್ತ್ಯ ರ್ಥಮಭ್ಯಸೇತ್ ॥ ಧ್ಯಾನಜ್ಞಾನಾತ್ಮಕಃ ಸೂಕ್ಷ್ಮಃ ಶಿವಯೋಗೋ ಮಹಾ ಮಖಃ। ವಿಶಿಷ್ಟಃ ಸರ್ವಯಜ್ಞಾನಾಮಸಂಖ್ಯಾತೈರ್ಮಹಾಮಖೈಃ ॥

ಶಿವಧರ್ಮೋತ್ತರ.

ಧ್ಯಾನಯಜ್ಞವು ಚಿತ್ತಶುದ್ಧಿಗೆ ಮುಖ್ಯ. ಅದರಲ್ಲಿ ಹಿಂಸಾದಿದೋಷ ಗಳಿಲ್ಲ. ಆದ್ದರಿಂದ ಅದು ಅಪವರ್ಗ [ಮೋಕ್ಷ] ಪ್ರದ. ಉಳಿದ ಯಜ್ಞಾದಿ ಪಶುಧರ್ಮಗಳು ಅನಿತ್ಯಫಲಪ್ರದಗಳು. ನಿತ್ಯವಾದ ಮುಕ್ತಿಗಾಗಿ ಶಿವಯೋಗಾ ಭ್ಯಾಸಮಾಡಬೇಕು. ತಪಸ್ಸು ಕರ್ಮ ಜಪ ಧ್ಯಾನ ಜ್ಞಾನ ರೂಪವಾದ ಪಂಚ ವಿಧ ಶಿವಯೋಗವು "ಮಹಾಯಜ್ಞ". ಇದು ಉಳಿದೆಲ್ಲ ಯಜ್ಞಗಳಿಗಿಂತ ಶ್ರೇಷ್ಠ. ಈ ವಿಷಯವನ್ನು ಮುಂದಿನ ಮಂತ್ರವು ಪ್ರತಿಪಾದಿಸುತ್ತದೆ.

ತಪಃ ಶ್ರದ್ಧೇ ಯೇಹ್ಯುಪವಸಂತ್ಯರಣ್ಯೇ
  ಶಾಂತಾ ವಿದ್ವಾಂಸೋ ಭೈಕ್ಷ್ಯ ಚರ್ಯಾಂ ಚರಂತಃ।
ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ
  ಯತ್ರಾಮೃತಸ್ಸಪುರುಷೋಹ್ಯವ್ಯಯಾತ್ಮಾ ॥ ೧೧ ॥

[ತಪಃ] ಕೃಚ್ಛ್ರಚಾಂದ್ರಾಯಣಾದಿಗಳನ್ನುಳಿದು ಶಿವಾಶ್ರಮಕ್ಕೆ ಉಚಿತ ವಾದ ಧರ್ಮವು ಮತ್ತು [ಶ್ರದ್ಧಾ] ಶ್ರೀಗುರುವು ಉಪದೇಶಮಾಡಿದ ಪರವಿದ್ಯಾ ರೂಪವಾದ ಮಂತ್ರಾರ್ಥೋಪಾಸನೆಯಲ್ಲಿ ನಂಬುಗೆಯು; ಇವೆರಡನ್ನೂ [ಯೇ] ಯಾವ [ಶಾಂತಾಃ] ಶಾಂತಿಯುಕ್ತರೂ [ಭೈಕ್ಷ್ಯ ಚರ್ಯಾಂ] ಭಿಕ್ಷಾಶನದಿಂದ ಪ್ರಾಣಧಾರಣವನ್ನು [ಚರಂತಃ] ಮಾಡುವವರು; ಅಂದರೆ ಪರಿಗ್ರಹವುಳ್ಳ ಬ್ರಹ್ಮಚಾರಿ ಮೊದಲಾದ ನಾಲ್ಕುವಿಧ ಶಿವಾಶ್ರಮಿಗಳಾದ[ವಿದ್ವಾಂಸಃ]ಶಿವತತ್ತ್ವ ಜ್ಞಾನಿಗಳು [ಅರಣ್ಯೇ] ನಿರ್ಜನಪ್ರದೇಶವಾದ ಅರಣ್ಯದಲ್ಲಿರುವ ಪುರುಷರು [ಉಪವಸಂತಿ] ಸೇವಿಸುವರೂ [ತೇ] ಅಂಥವರು [ವಿರಜಾಃ] ದುಃಖಕರವಾದ ಆತ್ಮನನ್ನಾವರಿಸಿದ ಮಲಗಳಿಂದ ಬಿಡಲ್ಪಟ್ಟವರಾಗಿ [ಸೂರ್ಯದ್ವಾರೇಣ] ಸೂರ್ಯಮಂಡಲವನ್ನು ಭೇದಿಸಿ [ಯತ್ರ] ಯಾವ ಚಿಚ್ಛಕ್ತಿರೂಪ ದಿವ್ಯ ತೇಜೋಮಂಡಲಮಧ್ಯಲೋಕದಲ್ಲಿ [ಅವ್ಯಯಾತ್ಮಾ] ನಿತ್ಯಜ್ಞಾನಸ್ವಭಾವವುಳ್ಳ [ಅಮೃತಃ] ಅವಿನಾಶಿಯಾದ [ಪುರುಷಃ] ಪುರುಷನಿರುವನೋ ಅಂಥ ವಿಶ್ವಾ

ಕಾರಪರಾಹಂತಾಮಯ ದಿವ್ಯತೇಜೋಮಂಡಲಲೋಕವನ್ನು [ಪ್ರಯಾಂತಿ] ಹೊಂದುತ್ತಾರೆ. ಅವರಿಗೆ ಮತ್ತೆ ಬಂಧವಿಲ್ಲವೆಂದು ತಾತ್ಪರ್ಯ. ಈ ಮಂತ್ರ ಭಾಷ್ಯದಲ್ಲಿ ಶಿವಾಶ್ರಮಧರ್ಮಗಳು ವಿಸ್ತರಿಸಲ್ಪಟ್ಟವೆ.

## ಗುರುಸಮೀಪಾಭಿಗಮನಂ

ಸಂಸಾರಹೇಯಸ್ಥಲವನ್ನು ದಾಂಟಿದ ಭಕ್ತನು ಪರವಿದ್ಯಾರ್ಜನೆಗಾಗಿ ಸದ್ಗುರುಸಾನ್ನಿಧ್ಯವನ್ನು ಸಾರಬೇಕು

ಇದುವರೆಗೆ ಪಶುಕರ್ಮವು ಅನಿತ್ಯಫಲವನ್ನೂ ಪತಿಕರ್ಮವು ನಿತ್ಯಫಲ ವನ್ನೂ ಕೊಡುವುದೆಂದು ಹೇಳಿಯಾಯಿತು. ಅನಿತ್ಯಫಲದಲ್ಲಿಯೂ ಅದಕ್ಕೆ ಸಾಧಕವಾದ ಪಶುಕರ್ಮದಲ್ಲಿಯೂ ಜುಗುಪ್ಸೆಬಂದಮೇಲೆ ನಿತ್ಯಫಲದಲ್ಲಿಯೂ ಅದಕ್ಕೆ ಸಾಧಕವಾದ ಶಿವಾಶ್ರಮೋಚಿತ ಪತಿಕರ್ಮದಲ್ಲಿಯೂ ಆಸಕ್ತಿಹುಟ್ಟು ತ್ತದೆ. ಸಂಸಾರದಲ್ಲಿ ಹೇಯಬುದ್ಧಿಯುಂಟಾಗಿ ಪರಶಿವಲಿಂಗ ಜಿಜ್ಞಾಸೆಯುಳ್ಳ ಅಧಿಕಾರಿಭಕ್ತನು ಸದ್ಗುರುವನ್ನು ಆಶ್ರಯಿಸಬೇಕು ಎಂಬುದನ್ನು ಈ ಮಂತ್ರವು ಬೋಧಿಸುತ್ತದೆ.

**ಪರೀಕ್ಷ್ಯಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ**
**ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ ।**
**ತದ್ವಿಜ್ಞಾನಾರ್ಥಂಸ ಗುರುಮೇವಾಭಿಗಚ್ಛೇತ್**
**ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥ ೧೨ ॥**

ಬ್ರಹ್ಮ ಅಣತೀತಿ ಬ್ರಾಹ್ಮಣಃ ಎಂಬ ವ್ಯುತ್ಪತ್ತಿಯಿಂದ ಷಡಧ್ವಾಶೋಧನ ಪೂರ್ವಕ ದೀಕ್ಷಿತನಾದ ಅಧಿಕಾರಿ ಪುರುಷನು [ಕರ್ಮಚಿತಾನ್] ನಶ್ವರಫಲ ಪ್ರದಗಳಾದ ಅಗ್ನಿಹೋತ್ರಾದಿಕರ್ಮಗಳಿಂದುಂಟಾದ [ಲೋಕಾನ್] ಸ್ವರ್ಗಸ್ವಾ ರಾಜ್ಯಾದಿಫಲಗಳನ್ನು (ಪರೀಕ್ಷ್ಯ) ಅನುಮಾನಾಗಮಾದಿ ಪ್ರಮಾಣಗಳಿಂದ ನಶ್ವರವಾದವುಗಳೆಂದು ತಿಳಿದು [ನಿರ್ವೇದಂ] ಜ್ಯೋತಿಷ್ಟೋಮಾದಿಪಶುಕರ್ಮ ಗಳಲ್ಲಿ ವೈರಾಗ್ಯವನ್ನು [ಆಯಾತ್] ಪಡೆಯಬೇಕು. ಅಂದರೆ,ಅನಿತ್ಯಲೋಕ ಗಳಲ್ಲಿಯೂ ಅವುಗಳಿಗೆ ಸಾಧನವಾದ ಪಶುಕರ್ಮಗಳಲ್ಲಿಯೂ ಜಿಹಾಸೆಪಡೆ

ಯಬೇಕು. ಏಕೆಂದರೆ [ಅಕೃತಃ] ನಿತ್ಯವಾದ ಶಿವಲೋಕವುಎಂದರೆ ಪರಾಹಂತಾಮಯಚಿಚ್ಛಕ್ತಿವಿಕಾಸರೂಪ ಮೋಕ್ಷವು [ಕೃತೇನ] ಪಶುಕರ್ಮದಿಂದ [ನಾಸ್ತಿ] ದೊರೆಯುವುದಿಲ್ಲ. ಜ್ಞಾನವಿಶಿಷ್ಟಪತಿಕರ್ಮದಿಂದ ಮಾತ್ರ ಅಂಥ ಮೋಕ್ಷವು ದೊರೆಯತ್ತದೆ. ಎಂದು ಅಭಿಪ್ರಾಯ. ಆದ್ದರಿಂದ [ತದ್ವಿಜ್ಞಾನಾರ್ಥಂ] ಅಂಥ ಮೋಕ್ಷವಿಚಾರವನ್ನು ತಿಳಿಯುವುದಕ್ಕಾಗಿ [ಸಃ] ಆ ಅಧಿಕಾರಿಯು [ಸಮಿತ್ಪಾಣಿಃ] ಲಿಂಗಧಾರಣರೂಪ ಶಿವದೀಕ್ಷಾಂಗವಾದ ಹೋಮದ ಸಮಿತ್ತುಗಳನ್ನೂಗುರುಗಳಿಗೆ ಉಪಯುಕ್ತಗಳಾದ ಹಣ್ಣು ಹಂಪಲು ಮೊದಲಾದುವನ್ನೂ ಕೈಯಲ್ಲಿ ತೆಗೆದುಕೊಂಡು [ಶ್ರೋತ್ರಿಯಂ] ವೇದವೇದಾಂಗಾದಿಗಳಲ್ಲಿ ನಿಷ್ಣಾತನೂ [ಬ್ರಹ್ಮನಿಷ್ಠಂ] ದೃಢೀಕೃತಲಿಂಗಾಂಗಸಾಮರಸ್ಯಾನುಸಂಧಾನವುಳ್ಳವನೂ ಆದ [ಗುರುಮೇವ] ಗುರುವಂಶೋದ್ಭವನೆನಿಸಿದ ಆಚಾರ್ಯನನ್ನೇ [ಅಭಿಗಚ್ಛೇತ್] ಆಶ್ರಯಿಸಬೇಕು.

ಈ ಮಂತ್ರಭಾಷ್ಯದಲ್ಲಿ ಕರ್ಮಜ್ಞಾನಗಳ ಸಮಸಮುಚ್ಚಯ, ಗುರುಶಿಷ್ಯರ ಸ್ವರೂಪ ಮುಂತಾದ ವಿಷಯಗಳು ಹೃದಯಂಗಮವಾಗಿ ಪ್ರತಿಪಾದಿತವಾಗಿವೆ.

### ಪರವಿದ್ಯೋಪದೇಶವಿಧಿ

ತಸ್ಮೈ ಸ ವಿದ್ವಾನುಪಪನ್ನಾಯ ಸಮ್ಯಕ್
ಪ್ರಶಾಂತಚಿತ್ತಾಯ ಶಮಾನ್ವಿತಾಯ ।
ಯೇನಾಕ್ಷರಂ ಪುರುಷಂ ವೇದ ಸತ್ಯಂ
ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್ ॥ ೧೩ ॥

## ಪ್ರಥಮ ಮುಂಡಕೇ ದ್ವಿತೀಯಃ ಖಂಡಃ

[ಸಃ] ಜಗತ್ಪ್ರಸಿದ್ಧರಾದ ರೇಣುಕಾದಿ ಆಚಾರ್ಯರ ವೀರಾದಿ ಗೋತ್ರೋದ್ಭವನೂ [ವಿದ್ವಾನ್] ಲಿಂಗಾಂಗಸಾಮರಸ್ಯ ಸಿದ್ಧಿಯುಳ್ಳವನೂ ಆದ ಗುರುಮೂರ್ತಿಯು [ಉಪಪನ್ನಾಯ] “ ಎಲೈ ಶಿವಜ್ಞಾನಮಹೋದಧಿಯೆ,

ಭವರೋಗದಿಂದ ಬಳಲುತ್ತಿರುವ ನನ್ನನ್ನು ಉದ್ಧರಿಸು" ಎಂದು ಪ್ರಾರ್ಥಿಸುತ್ತಾ ಸಮಿತ್ಪಾಣಿಯಾಗಿ ಮರೆಹೊಕ್ಕಿರುವ [ಸಮ್ಯಕ್ ಪ್ರಶಾಂತಚಿತ್ತಾಯ] ಸಂಪೂರ್ಣ ಪರಿಶುದ್ಧಚಿತ್ತವುಳ್ಳ ಎಂದರೆ ದೀಕ್ಷಾವಿಧ್ಯುಕ್ತವಾದ ಭೂತಶುದ್ಧಿ ಮೊದಲಾಗಿ ಸ್ವಸ್ತಿಕಾರೋಹಣಮುಂತಾದ ಶಿವದೀಕ್ಷಾಸಂಸ್ಕಾರದಿಂದ ಶುದ್ಧಾಂತರಂಗವುಳ್ಳ [ಶಮಾನ್ವಿತಾಯ] ಶುದ್ಧಾತ್ಮನಾದ ಎಂದರೆ ಗುರುವಿನಿಂದ ವೇಧಾದಿದೀಕ್ಷಾತ್ರಯದಿಂದ ಮಾಯಾದಿಮಲತ್ರಯವು ನಷ್ಟವಾಗಿ ಇಷ್ಟಾದಿ ಲಿಂಗತ್ರಯವು ಸ್ಥೂಲಾದಿತನುತ್ರಯದಲ್ಲಿ ಧಾರಣವಾದ ಮೇಲೆ ಆವನು ಶುದ್ಧನೆನಿಸುತ್ತಾನೆ. ಅಂಥ ಶುದ್ಧಾತ್ಮನಾದ [ತಸ್ಮೈ] ಆ ಶಿಷ್ಯನಿಗೆ [ಯಯಾ] ಶಿವತತ್ತ್ವವನ್ನು ಬೋಧಿಸುವ ಯಾವ ಪಂಚಾಕ್ಷರಮಹಾಮನುರೂಪವಾದ ಪರವಿದ್ಯೆಯಿಂದ ಅವನು [ಅಕ್ಷರಂ] ನಾಶರಹಿತನಾದ [ಪುರುಷಂ] ಸತ್ಯಸ್ವರೂಪ ಪರಶಿವ ಲಿಂಗವನ್ನು [ವೇದ] ತಿಳಿಯುವನೋ ಅಂಥ [ತಾಂ] ಆ ಪರವಿದ್ಯೆಯನ್ನು [ತತ್ತ್ವತಃ] ವಾಸ್ತವಿಕವಾಗಿ [ಬ್ರಹ್ಮವಿದ್ಯಾಂ] ಲಿಂಗಾಂಗಸಾಮರಸ್ಯ ಬೋಧಕವಾದ ಪಂಚಾಕ್ಷರಿಯನ್ನು [ಪ್ರೋವಾಚ] ಉಪದೇಶಿಸಬೇಕು.

ಪಂಚಾಕ್ಷರಿಯ ಮಹತ್ವ, ಗುರುಶಿಷ್ಯರ ಸಂಬಂಧ, ಸಗುಣನಿರ್ಗುಣೋಪಾಸನೆಗಳ ರಹಸ್ಯ, ಅಷ್ಟಾವರಣದ ಆವಶ್ಯಕತೆ ಮುಂತಾದ ವಿಚಾರಗಳು ಸಪ್ರಮಾಣವಾಗಿ ಈ ಮಂತ್ರಭಾಷ್ಯದಲ್ಲಿ ನಿರೂಪಿಸಲ್ಪಟ್ಟವೆ.

ಭಕ್ತಸ್ಥಲವು ಮುಗಿಯಿತು

ಇದು ಪ್ರಥಮ ಮುಂಡಕ



# ದ್ವಿತೀಯಮುಂಡಕ ಪ್ರಥಮಖಂಡ

ಮಾಹೇಶಸ್ಥಲ

## ಲಿಂಗಾಂಗಗಳಸ್ವರೂಪ

ಪ್ರಥಮಮುಂಡಕದಲ್ಲಿ ಪಶುಕರ್ಮಗಳಿಗೆ ಅನಿತ್ಯಲೋಕಪ್ರಾಪ್ತಿಯು ಫಲವೆಂದೂ, ಪತಿಕರ್ಮಗಳಿಗೆ ಅಪವರ್ಗ [ಮುಕ್ತಿ] ಪ್ರಾಪ್ತಿಯು ಫಲವೆಂದೂ ಹೇಳಿಯಾಯಿತು. ಪ್ರಕೃತ ಲಿಂಗಾಂಗಸಾಮರಸ್ಯಬೋಧಕ ಪರವಿದ್ಯೋಪ ದೇಶಕ್ಕಾಗಿ ದ್ವಿತೀಯಮುಂಡಕವು ಆರಂಭವಾಗಿದೆ. ಲಿಂಗಾಂಗಗಳ ಪರಿಜ್ಞಾನವಿಲ್ಲದೆ ಅವುಗಳ ಸಾಮರಸ್ಯಜ್ಞಾನವಾಗಲಾರದು. ಅದಕ್ಕಾಗಿ ದೃಷ್ಟಾಂತ ಪೂರ್ವಕ ಲಿಂಗಸ್ವರೂವನ್ನು ಇಲ್ಲಿ ಹೇಳಲಾಗುತ್ತದೆ.

ತದೇತತ್ ಸತ್ಯಂ
ಯಥಾಸುದೀಪ್ತಾತ್ ಪಾವಕಾತ್ ಸ್ಫುಲಿಂಗಾಃ
ಸಹಸ್ರಶಃ ಪ್ರಭವಂತೇ ಸರೂಪಾಃ ।
ತಥಾಕ್ಷರಾದ್ವಿವಿಧಾಃ ಸೌಮ್ಯಭಾವಾಃ
ಪ್ರಜಾಯಂತೇ ತತ್ರಚೈವಾಪಿಯಂತಿ ॥ ೧ ॥

[ಯಥಾ] ಹೇಗೆ [ಸುದೀಪ್ತಾತ್] ಸೌದೆಗಳನ್ನು ಹಾಕುವುದರಿಂದ ಪ್ರಜ್ವಲಿಸುವ [ಪಾವಕಾತ್] ಬೆಂಕಿಯಿಂದ [ಸಹಸ್ರಶಃ] ಅನೇಕ [ಸರೂಪಾಃ] ಸಮಾನರೂಪವುಳ್ಳ ವಿಸ್ಫುಲಿಂಗಾಃ] ಸಾಧಾರಣ ಅಸಾಧಾರಣಧರ್ಮವುಳ್ಳ ಕಿಡಿಗಳು [ಪ್ರಭವಂತೇ] ಹೊರಡುತ್ತವೆಯೋ [ತಥಾ] ಹಾಗೆ [ಸೌಮ್ಯ] ಎಲೈ ಸೌಮ್ಯನಾದ ಶಿಷ್ಯನೇ [ಅಕ್ಷರಾತ್] ಚಿಚ್ಛಕ್ತಿವಿಶಿಷ್ಟವಾದ ಪರಶಿವ ಬ್ರಹ್ಮದ ದೆಶೆಯಿಂದ [ವಿವಿಧಾಃ] ನಾನಾವಿಧವಾದ [ಭಾವಾಃ] ಶಿವಾಂಶರಾದ ಅಂದರೆ ಅನಾದ್ಯವಿದ್ಯಾಸಂಬಂಧದಿಂದ ಜೀವರೆನಿಸಿದವರು [ಪ್ರಜಾಯಂತೇ] ಆಮೆಯಿಂದ ಕೈಕಾಲುಗಳು ಹೊರಕ್ಕೆ ಬರುವಂತೆ ಉದ್ಭವಿಸುತ್ತಾರೆ. ಮತ್ತೆ ಪರವಿದ್ಯಾರೂಪ ಸಾಮರಸ್ಯಾಭ್ಯಾಸದಿಂದ ಜೀವಭಾವವಳಿದು ಶುದ್ಧರಾಗಿ

[ತತ್ರಚೈವ] ಅದೇ ಅಕ್ಷರ ಪರಶಿವ ಬ್ರಹ್ಮಲಿಂಗದಲ್ಲಿ ಸಮುದ್ರದಲ್ಲಿ ನದಿಗಳು ಅಡಗುವಂತೆ [ಅಪಿಯಂತಿ] ವಿಲೀನರಾಗುತ್ತಾರೆ. [ತದೇತತ್] ಎಂಬ ಈ ವಿಷಯವು [ಸತ್ಯಂ] ನಿಜವಾದುದು.

ಈ ಮಂತ್ರವ್ಯಾಖ್ಯಾನದಲ್ಲಿ ಭೇದಾಭೇದಸಿದ್ಧಾಂತರಹಸ್ಯವನ್ನು ಹೃದಯಂಗಮವಾಗಿ ಭಾಷ್ಯಕಾರರು ಪ್ರತಿಪಾದಿಸಿರುವರಲ್ಲದೆ ಅದ್ವೈತಿಗಳ ಜೀವ ಮಿಥ್ಯಾತ್ವ ವಾದವನ್ನು ಶಂಕಾಸಮಾಧಾನಗಳ ಮೂಲಕ ನಿರಾಕರಿಸಿರುತ್ತಾರೆ.

## ಅಕ್ಷರ ಪರಶಿವಬ್ರಹ್ಮಸ್ವರೂಪ

ಹಿಂದೆ ಅಕ್ಷರ ಪರಶಿವ ಬ್ರಹ್ಮಸ್ವರೂಪವನ್ನು ಸಂಕ್ಷೇಪವಾಗಿ ಹೇಳಲಾಯಿತು. ಇಲ್ಲಿ ಅದನ್ನು ವಿಸ್ತಾರವಾಗಿ ವರ್ಣಿಸಲಾಗಿದೆ.

ದಿವ್ಯೋಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋಹ್ಯಜಃ
ಅಪ್ರಾಣೋಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ||೨||

(ದಿವ್ಯಃ) ಸ್ವತಂತ್ರ ಸ್ವಪ್ರಕಾಶಶಕ್ತಿವಿಶಿಷ್ಟನಾದ (ಅಮೂರ್ತಃ) ಅಪರಿಚ್ಛಿನ್ನಪರಿಮಾಣವುಳ್ಳ (ಪುರುಷಃ) ಪುರುಷನೆನಿಸುವ (ಸಬಾಹ್ಯಾಭ್ಯಂತರಃ) ಭಕ್ತರ ಅನುಗ್ರಹಕ್ಕಾಗಿ ಘೃತಕಾಠಿನ್ಯನ್ಯಾಯದಿಂದ ಯೋಗ ಭೋಗ ತ್ಯಾಗಗಳೆಂಬ ತ್ರಿವಿಧ ಶರೀರಗಳಲ್ಲಿ ಭಾವ ಪ್ರಾಣ ಇಷ್ಟಲಿಂಗರೂಪದಿಂದ ಇರುವವನೂ, (ಅಜಃ) ಜನ್ಮವಿಲ್ಲದವನು ಅಂದರೆ ಹುಟ್ಟುವುದು, ಇರುವುದು ಬೆಳೆವುದು, ಪರಿಣಾಮಹೊಂದುವುದು, ಕ್ಷಯಿಸುವುದು ಮತ್ತು ನಾಶಹೊಂದುವುದು (ಜನ್ಮಸ್ಥಿತಿ ವೃದ್ಧಿ ಪರಿಣಾಮ ಅಪಕ್ಷಯ ವಿನಾಶ) ಎಂಬ ಷಡ್ಭಾವವಿಕಾರಗಳಿಲ್ಲದವನು ಷಡೂರ್ಮಿಗಳಿಲ್ಲದವನೆಂದು ಅರ್ಥ. (ಅಪ್ರಾಣೋ ಹಿ) ಪ್ರಾಣವಿಲ್ಲದವನಾದ್ದರಿಂದಲೇ (ಅಮನಾಃ) ಸಂಕಲ್ಪವಿಕಲ್ಪರೂಪ ಮನಸ್ಸಿಲ್ಲದವನು. ಆದ್ದರಿಂದಲೇ (ಶುಭ್ರಃ) ಸದಾ ನಿರ್ಮಲನು. ಎಂದರೆ ತನ್ನ ಅಂಶವಾದ ಜೀವನಿಗೆ ಒಮ್ಮೆ ಮಲಾವರಣವಾಗುವಂತೆ ಇವನಿಗೆ ಯಾವಾಗಲೂ ಮಲಾವರಣವಿಲ್ಲವೆಂದು ಭಾವ. (ಪರತಃ) ತನಗಿಂತ ವಿಲಕ್ಷಣವಾದ ಜಡಪ್ರಕೃತಿಗಿಂತ ಪರವೆನಿಸಿರುವ (ಅಕ್ಷರಾತ್) ಅಕ್ಷರಶಬ್ದವಾಚ್ಯವಾದ ಚಿಚ್ಛಕ್ತಿಗಿಂತಲೂ ಪರಃ) ಆ ಚಿಚ್ಛಕ್ತಿಗೆ ಅಧಿಷ್ಠಾನವಾಗಿರುವುದರಿಂದ ಪರಶ್ರೇಷ್ಠನೆನಿಸಿದವನೇ

ಆ ಪರಶಿವ ಬ್ರಹ್ಮನು. ಅವನಿಗಿಂತಲೂ ಮತ್ತಾರೂ ಪರವೆನಿಸುವುದಿಲ್ಲವೆಂದು ತಾತ್ಪರ್ಯ.

## ಲಿಂಗ ಅಂಗ ಮತ್ತು ಉಪಾಂಗಗಳು ಮತ್ತು ಪರಿಣಾಮದಿಂದ ಜಗತ್‌ಸೃಷ್ಟಿ

ಶುದ್ಧಾತ್ಮನಿಗೆ ಅಭಿನ್ನವಾದ ಮಹಾಲಿಂಗವು ಪ್ರಣವಮಯ ಚಿಚ್ಛಕ್ತಿ ವಿಶಿಷ್ಟ 'ಊರ್ಧ್ವಾಯ ನಮಃ, ಊರ್ಧ್ವಲಿಂಗಾಯ ನಮಃ' ಮುಂತಾದ ಶ್ರುತಿ ಪ್ರತಿಪಾದ್ಯವೂ ಆಗಿರುತ್ತದೆಯೆಂದು ಹಿಂದಿನ ಮಂತ್ರಭಾಷ್ಯದಲ್ಲಿ ವಿಸ್ತರಿಸ ಲಾಗಿದೆ. ಪ್ರಕೃತ ಈ ಮಂತ್ರವು ಶಕ್ತಿವಿಶಿಷ್ಟವಾದ ಲಿಂಗಾಂಗೋಪಾಂಗ ಸ್ಥಲಗಳನ್ನು ಪ್ರತಿಪಾದಿಸುತ್ತದೆ. ಎಂದರೆ ಪಂಚಾಕ್ಷರಮಯವಾದ ಶಾಂತ್ಯ ತೀತಾದಿ ಕಲೆಗಳೆಂಬ ಹೆಸರುಗಳುಳ್ಳ ಪರಾದಿ ಪಂಚಶಕ್ತಿಗಳೂ ಅಂಥ ಶಕ್ತಿ ವಿಶಿಷ್ಟವಾದ ಪಂಚಲಿಂಗಸ್ಥಲ ಮುಂತಾದುವನ್ನು ಇಲ್ಲಿ ಹೇಳಿದೆ.

ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ ।
ಖಂ ವಾಯುರ್ಜ್ಯೋತಿರಾಪಶ್ಚ ಪೃಥಿವೀ ವಿಶ್ವಸ್ಯ ಧಾರಿಣೀ ॥೩॥

ಈ ಮಂತ್ರದಲ್ಲಿ ಅರ್ಥಕ್ರಮಕ್ಕೆ ಅನುಗುಣವಾಗಿ ಪಾಠಕ್ರಮವಿಲ್ಲ. ಏಕೆಂದರೆ "ಗತಾಃ ಕಲಾಃ ಪಂಚದಶ ಪ್ರತಿಷ್ಠಾ" (೩-೨-೭) ಎಂಬ ಮುಂದೆ ಹೇಳುವ ಮಂತ್ರದಲ್ಲಿ ಪ್ರಾಣಮೊದಲಾದವುಗಳು ಭೌತಿಕಗಳೆಂದು ಉಕ್ತವಾಗಿದೆ. ಆದರೆ ಪಂಚಭೂತಗಳ ಉತ್ಪತ್ತಿಯಾದ ಮೇಲೆ ಪ್ರಾಣ ಮೊದಲಾದುವನ್ನು ಹೇಳಬೇಕಾಗಿತ್ತು. ಅದಕ್ಕೆ ಬದಲಾಗಿ ಇಲ್ಲಿ ಮೊದಲೇ ಪ್ರಾಣಾದಿಗಳ ಉತ್ಪತ್ತಿ ಹೇಳಿದೆ.

ಹಿಂದೆ ಹೇಳಿದ 'ಚಿಚ್ಛಕ್ತಿ' ವಿಶಿಷ್ಟ ಅಕ್ಷರ ಪರಶಿವ ಮಹಾಲಿಂಗವು 'ಪರಾಶಕ್ತಿ' ವಿಶಿಷ್ಟವಾದಾಗ ಈಶಾನಬ್ರಹ್ಮವೆನಿಸುತ್ತದೆ. ಇದರಂತೆ ಆ ಮಹಾ ಲಿಂಗವು ಕ್ರಮವಾಗಿ 'ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾ ಶಕ್ತಿ ವಿಶಿಷ್ಟವಾಗಿ ತತ್ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತ ಬ್ರಹ್ಮ ಎಂಬ ಹೆಸರುಗಳನ್ನು ತಳೆಯುತ್ತದೆ. ಇವುಗಳಿಗೆ ಯ ವಾ ಶಿ ಮ ಮತ್ತು ನಕಾರಸ್ವರೂಪವಿದ್ದು ಕ್ರಮವಾಗಿ ಪ್ರಸಾದಲಿಂಗ ಚರಲಿಂಗ

ಶಿವಲಿಂಗ ಗುರುಲಿಂಗ ಮತ್ತು ಆಚಾರಲಿಂಗ' ಎಂಬ ಹೆಸರುಗಳು ಪ್ರಾಪ್ತವಾಗುತ್ತವೆ. ಅಂಥ ಆಯಾ ಬ್ರಹ್ಮಪ್ರಭೇದಗಳಿಂದ ಕ್ರಮವಾಗಿ ಸದಾಶಿವ, ಈಶ್ವರ, ರುದ್ರ, ವಿಷ್ಣು ಮತ್ತು ಬ್ರಹ್ಮ ಎಂಬ ಹೆಸರಿನ ಚಿದ್ವ್ಯಾಪನ ಮತ್ತು ಚಿತ್‌ಧೃತಿಶಕ್ತಿವಿಶಿಷ್ಟ ಶರಣ, ಪ್ರಾಣಲಿಂಗಿ, ಪ್ರಸಾದಿ, ಮಹೇಶ ಮತ್ತು ಭಕ್ತ ಎಂಬ ಅಂಗಗಳಲ್ಲಿ ಶಬ್ದೈಕ ಗುಣವುಳ್ಳ ಆಕಾಶ, ಶಬ್ದಸ್ಪರ್ಶ ಗುಣವುಳ್ಳ ವಾಯು, ಶಬ್ದಸ್ಪರ್ಶರೂಪ ಗುಣವುಳ್ಳ ತೇಜಸ್ಸು, ಶಬ್ದಸ್ಪರ್ಶರಸ ಗುಣಕ ಜಲ ಮತ್ತು ಶಬ್ದಸ್ಪರ್ಶರೂಪರಸ ಗಂಧಗುಣವುಳ್ಳ ಪೃಥಿವಿಗಳು ಹುಟ್ಟಿದವೆಂದು ಈ ಶ್ರುತಿಯು ಪ್ರತಿಪಾದಿಸುತ್ತದೆ. ಇದಕ್ಕೆ 'ಈಶಾನಾದಾಕಾಶಂ, ತತ್ಪುರುಷಾತ್ ವಾಯುಃ, ಅಘೋರಾದ್ವಹ್ನಿಃ, ವಾಮದೇವಾದುದಕಂ, ಸದ್ಯೋಜಾತಾತ್ ಪೃಥಿವೀ' (ಬೃ. ಜಾ. ೧.) ಎಂಬ ಶ್ರುತಿಯು ಪ್ರಮಾಣ.

(ಏತಸ್ಮಾತ್) ಮೇಲೆ ಹೇಳಿದಂತೆ ಚಿಚ್ಛಕ್ತಿವಿಶಿಷ್ಟ ಪರಶಿವ ಮಹಾಲಿಂಗವು ಆಯಾ ಶಕ್ತಿವಿಶಿಷ್ಟವಾಗಿ ಆಯಾ ಪ್ರಣವಮಯ ಪ್ರಸಾದಾದಿಲಿಂಗ ರೂಪವಾದ ಈಶಾನಾದಿ ಬ್ರಹ್ಮಗಳಿಂದ ಕ್ರಮವಾಗಿ ಆಕಾಶಾದಿ ಪಂಚಭೂತ ಸೃಷ್ಟಿಯಾದಮೇಲೆ ಕ್ರಿಯಾಶಕ್ತಿಪ್ರಧಾನವಾದ ಪರಶಿವ ಬ್ರಹ್ಮದ ದೆಶೆಯಿಂದ (ಪ್ರಾಣಃ) ಶರೀರದೊಳಗೆ ಸಂಚರಿಸುವ ಪ್ರಾಣಾಪಾನ ಮೊದಲಾದ ಕ್ರಿಯಾಶಕ್ತಿರೂಪ ಪ್ರಾಣವಾಯುವೂ, (ಏತಸ್ಮಾತ್) ಇಚ್ಛಾಶಕ್ತಿಪ್ರಧಾನ ಬ್ರಹ್ಮದಿಂದ ಸಂಕಲ್ಪವಿಕಲ್ಪಾತ್ಮಕ ಇಚ್ಛಾಶಕ್ತಿಪ್ರಧಾನ ಅಂತಃಕರಣವೂ (ಏತಸ್ಮಾತ್) ಜ್ಞಾನಶಕ್ತಿ ಪ್ರಧಾನ ಬ್ರಹ್ಮದಿಂದ (ಸರ್ವೇಂದ್ರಿಯಾಣಿ) ಜ್ಞಾನಕ್ರಿಯಾಶಕ್ತಿ ಪ್ರಧಾನ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ (ಜಾಯಂತೇ, ಹುಟ್ಟುತ್ತವೆ. ಅಂದರೆ 'ಅಕ್ಷರ' ಎಂಬ ಪರಶಿವ ಮಹಾಲಿಂಗವೊಂದೇ ಉಪಾಸ್ಯ–ಉಪಾಸಕ ರೂಪವಾಗಿ ಐದು ಲಿಂಗರೂಪವಾಗಿಯೂ ಐದು ಅಂಗರೂಪರೂಪವಾಗಿಯೂ ಆವಿರ್ಭವಿಸುವುದು ಎಂದು ತಾತ್ಪರ್ಯ.

(ಇದಕ್ಕೆ ಸಂಬಂಧಿಸಿದ ವಿವರವನ್ನು ಮುಂದಿನ ಪುಟದಲ್ಲಿ ಸೂಚಿಸಲಾಗಿದೆ)

## ಶಿವಜಗನ್ಮಯತ್ವನಿರೂಪಣ

ಷಟ್‌ಸ್ಥಲಬ್ರಹ್ಮವು ಚರಾಚರವಿಶ್ವಾತ್ಮಕವೆಂದೂ ವಿಶ್ವಕ್ಕೆ ಅಧಿಕವೆಂದೂ ಹೇಳಿದಂತಾಯಿತು. ತಂತುಗಳಿಂದ ಹುಟ್ಟಿದ. ಪಟವು ತಂತುಮಯವಾಗಿರು

# ಚಿಚ್ಛಕ್ತಿವಿಶಿಷ್ಟ ಅಕ್ಷರ ಪರಶಿವ ಮಹಾಲಿಂಗವು ಪ್ರವೃತ್ತಿಗೆ ಉನ್ಮುಖವಾದಾಗ ಶಿವನ ಪರಿಣಾಮದಿಂದ ಜಗತ್ ಸೃಷ್ಟಿ.*

| ಶಕ್ತಿವಿಶಿಷ್ಟ | ಪ್ರಣವಮಯ | ಲಿಂಗರೂಪ | ಬ್ರಹ್ಮದಿಂದ | ತತ್ತ್ವಮಯ | ಶಕ್ತಿವಿಶಿಷ್ಟ | ಅಂಗನ | ಮುಖ್ಯಗುಣವುಳ್ಳ | ಭೂತವು | ಹುಟ್ಟುವುದು. |
|---|---|---|---|---|---|---|---|---|---|
| ೧ ಪರಾ | ಯಕಾರ | ಪ್ರಸಾದ | ಈಶಾನ | ಸದಾಶಿವ | ಚಿದ್ವ್ಯಾಪನ | ಶರಣ | ಶಬ್ದ | ಆಕಾಶ | ” |
| ೨ ಆದಿ | ವಾಕಾರ | ಚರ | ತತ್ಪುರುಷ | ಈಶ್ವರ | ಚಿತ್‌ಸ್ಪಂದನ | ಪ್ರಾಣಲಿಂಗಿ | ಸ್ಪರ್ಶ | ವಾಯು | ” |
| ೩ ಇಚ್ಛಾ | ಶಿಕಾರ | ಶಿವ | ಅಘೋರ | ರುದ್ರ | ಚಿದುಜ್ವಲನ | ಪ್ರಸಾದಿ | ರೂಪ | ಅಗ್ನಿ | ” |
| ೪ ಜ್ಞಾನ | ಮಕಾರ | ಗುರು | ವಾಮದೇವ | ವಿಷ್ಣು | ಚಿದ್ವ್ಯಾಪನ | ಮಹೇಶ | ರಸ | ಜಲ | ” |
| ೫ ಕ್ರಿಯಾ | ನಕಾರ | ಆಚಾರ | ಸದ್ಯೋಜಾತ | ಬ್ರಹ್ಮ | ಚಿತ್‌ಧೃತಿ | ಭಕ್ತ | ಗಂಧ | ಭೂಮಿ | ” |

೬ ಕ್ರಿಯಾಶಕ್ತಿವಿಶಿಷ್ಟ ಪರಬ್ರಹ್ಮದ ದೆಶೆಯಿಂದ ಕ್ರಿಯಾಶಕ್ತಿಪ್ರಧಾನ ಪ್ರಾಣಾಪಾನವ್ಯಾನೋದಾನ ಸಮಾನವೆಂಬ ಪ್ರಾಣವಾಯುವೂ

೭ ಇಚ್ಛಾಶಕ್ತಿ ” ” ಇಚ್ಛಾಶಕ್ತಿಪ್ರಧಾನ ಅಂತಃಕರಣ (ಮನಸ್ಸು ಚಿತ್ತ ಬುದ್ಧಿ ಅಂಕಾರ) ವೂ

೮ ಜ್ಞಾನಶಕ್ತಿ ” ” ಜ್ಞಾನಕ್ರಿಯಾಶಕ್ತಿಪ್ರಧಾನ ಜ್ಞಾನೇಂದ್ರಿಯ ೧) ತ್ವಕ್ ಚಕ್ಷುಶ್ಶ್ರೋತ್ರ ಜಿಹ್ವಾಘ್ರಾಣ
೨) ವಾಕ್‌ಪಾಣಿಪಾದ ವಾಯು ಉಪಸ್ಥ

ಹುಟ್ಟುತ್ತವೆ.

* ಇದನ್ನು ಕ್ರಮವಾಗಿ 'ಪರಾಶಕ್ತಿವಿಶಿಷ್ಟ ಯಕಾರಪ್ರಣವಮಯ' ಮುಂತಾಗಿ ಓದಿಕೊಳ್ಳಬೇಕು.

ವಂತೆಯೂ, ಸಮುದ್ರದಿಂದ ಉತ್ಪನ್ನವಾದ ನೊರೆ ತೆರೆ ಬುದ್ಬುದಾದಿಗಳು ಸಮುದ್ರಮಯವಾಗಿರುವಂತೆಯೂ, ಆಕಾಶಾಂತರ್ಭೂತಗಳಾದ ವಾಯ್ವಾದಿಗಳಿಗೆ ಆಕಾಶವೇ ಕಾರಣವಾಗಿರುವಂತೆ ಷಟ್‌ಸ್ಥಲಪರಶಿವಾಂತರ್ಗತವಾದೀ ಚರಾಚರ ಪ್ರಪಂಚಕ್ಕೆ ಷಟ್‌ಸ್ಥಲ ಪರಶಿವಾತ್ಮಕತ್ವವನ್ನೂ, ತತ್ಕಾರಣತ್ವವನ್ನೂ, ಈ ಮಂತ್ರವು ಹೇಳುತ್ತದೆ.

ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ
ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ ।
ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ
ಪದ್ಭ್ಯಾಂ ಪೃಥಿವೀಹ್ಯೇಷ ಸರ್ವಭೂತಾಂತರಾತ್ಮಾ ॥ ೪ ॥

(ಅಗ್ನಿಃ) ಅಗ್ನಿಯೆಂದು ರೂಪಕವಾಗಿ ಹೇಳಿರುವ ದ್ಯುಲೋಕವು (ಅಸ್ಯ) ಈ ಪರಶಿವಬ್ರಹ್ಮದ (ಮೂರ್ಧಾ) ಶಿರಸ್ಸು (ಚಂದ್ರಸೂರ್ಯೌ) ಚಂದ್ರ ಮತ್ತು ಸೂರ್ಯರು (ಚಕ್ಷುಷೀ) ಕಣ್ಣುಗಳು, (ದಿಶಃ) ಪೂರ್ವ ಮೊದಲಾದ ದಿಕ್ಕುಗಳು (ಶ್ರೋತ್ರೇ) ಕಿವಿಗಳು (ವಿವೃತಾಃ) ವರ್ಣಾಧ್ವಾದಿ ಸ್ಥೂಲರೂಪದಿಂದ ವಿವೃತಿ ಅರ್ಥಾತ್ ವಿಕೃತಿಯನ್ನು ಹೊಂದಿದ (ವೇದಾಃ) ಋಗ್ವೇದಾದಿಗಳು (ವಾಕ್) ವೈಖರೀವಾಕ್ಕಾಗಿವೆ. (ವಾಯುಃ) ಮಹಾವಾಯುವೇ (ಪ್ರಾಣಃ) ವಿಶ್ವಮಯ ಶರೀರದಲ್ಲಿ ಸಂಚರಿಸುವ ಪ್ರಾಣವಾಯುವೂ (ಅಸ್ಯ) ಇವನಿಗೆ (ವಿಶ್ವಂ) ಚರಾಚರಾತ್ಮಕವಾದ ಸರ್ವ ವಿಶ್ವವೂ (ಹೃದಯಂ) ಪ್ರಣವಮಯ ಚಿಚ್ಛಕ್ತ್ಯಾತ್ಮಕವಾದುದು. (ಪೃಥಿವೀ) ಭೂಮಿಯು (ಪದ್ಭ್ಯಾಂ) ಪಾದಗಳು, (ಏಷ) ಮೇಲೆ ಹೇಳಿದ ಪರಶಿವನೇ (ಸರ್ವಭೂತಾಂತರಾತ್ಮಾಹಿ) ಸರ್ವಭೂತಗಳ ಅಂತರಾತ್ಮನಾಗಿದ್ದುಕೊಂಡಿರುವ ಈಶ್ವರನೇ ಆಗಿದ್ದಾನೆ.

## ಅಕ್ಷರದಿಂದ ಪ್ರಜೆಗಳ ಉತ್ಪತ್ತಿ

ವಿಶ್ವಾಧಿಕವೂ ವಿಶ್ವಮಯವೂ ಆಗಿರುವ ಪರಶಿವಬ್ರಹ್ಮಕ್ಕೆ ಸ್ಥೂಲ ಪ್ರಪಂಚ ನಿರ್ಮಾಣಮಾಡಿ ವಿನೋದಿಸಬೇಕೆಂಬ ಲೀಲೆಯುಂಟಾಗಿ ತನ್ನೊಳಿರುವ ಚಿಚ್ಛಕ್ತಿಯ ನೆನಹುಮಾತ್ರದಿಂದ ದ್ಯುಲೋಕವೇ ಮುಂತಾದ ಪಂಚಾಗ್ನಿ

ಗಳ ಉತ್ಪತ್ತಿಯಾಯಿತು. ತರುವಾಯ ಪ್ರಜೆಗಳ ಉತ್ಪತ್ತಿಯಾಯಿತೆಂಬುದನ್ನು ಮುಂದಿನ ಮಂತ್ರವು ಹೇಳುತ್ತದೆ.

ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯೋ
ಸೋಮಾತ್ಪರ್ಜನ್ಯ ಓಷಧಯಃ ಪೃಥಿವ್ಯಾಮ್ ।
ಪುಮಾನ್ ರೇತಃ ಸಿಂಚತಿ ಯೋಷಿತಾಂ
ಬಹ್ವೀಃ ಪ್ರಜಾಃ ಪುರುಷಾತ್ಸಂಪ್ರಸೂತಾಃ ॥ ೫ ॥

(ಯಸ್ಯ) ಯಾವ ದ್ಯುಲೋಕವೆಂಬ ಅಗ್ನಿಗೆ (ಸೂರ್ಯಃ) ಸೂರ್ಯನು (ಸಮಿಧಃ) ಕಾಷ್ಠವಾಗಿರುವನೋ (ಅಗ್ನಿಃ) ಅಂಥ ಅಗ್ನಿರೂಪ ದ್ಯುಲೋಕವು (ತಸ್ಮಾತ್) ಆ ಪರಶಿವಬ್ರಹ್ಮದಿಂದ ಹುಟ್ಟಿತು. ಅಂಥ ದ್ಯುಲೋಕರೂಪವಾದ ಆ ಅಗ್ನಿಯಿಂದ (ಸೋಮಃ) ಚಂದ್ರನೂ, (ಸೋಮಾತ್) ದ್ಯುಲೋಕಾಗ್ನಿಯಿಂದ ಹುಟ್ಟಿದ ಚಂದ್ರನಿಂದ (ಪರ್ಜನ್ಯಃ) ಮೇಘವೆಂಬ ಅಗ್ನಿಯೂ, ಆ ಪರ್ಜನ್ಯನಿಂದ ಭೂಮಿಯೂ, (ಭೂಮ್ಯಾಂ) ಭೂಮಿ ಎಂಬ ತೃತೀಯಾಗ್ನಿಯಿಂದ (ಓಷಧಯಃ) ಮಳೆಯಿಂದ ವನಸ್ಪತಿಗಳೂ ಉತ್ಪನ್ನವಾಗುತ್ತವೆ. ಅಂಥ ಓಷಧಿಗಳಿಂದ ಅನ್ನವೆಂಬ ಚತುರ್ಥಾಗ್ನಿಯು ಹುಟ್ಟುತ್ತದೆ. (ಪುಮಾನ್) ಚತುರ್ಥಾಗ್ನಿರೂಪನಾದ ಪುರುಷನು ಅನ್ನದಿಂದ ಉದಿಸಿದ (ರೇತಃ) ಶುಕ್ರವನ್ನು (ಯೋಷಿತಾಂ) ಪಂಚಮಾಗ್ನಿರೂಪವಾದ ಸ್ತ್ರೀಯಲ್ಲಿ ಹೀಗೆ ಶ್ರದ್ಧಾ ಸೋಮ ವರ್ಷ ಅನ್ನ ರೇತಸ್ಸು ಎಂಬ ಪಂಚಾಹುತಿಗಳನ್ನು ದ್ಯುಃ ಪರ್ಜನ್ಯ ಪೃಥಿವೀ ಪುರುಷ ಯೋಷಿತ್‌ಗಳೆಂಬ ಪಂಚಾಗ್ನಿಯಲ್ಲಿ ಕ್ರಮವಾಗಿ (ಸಿಂಚತಿ) ಸೇಚಿಸಲು ಆದರಿಂದ (ಬಹ್ವೀಃ) ಅನೇಕ (ಪ್ರಜಾಃ) ಮಾನವಾದಿ ಪ್ರಾಣಿವರ್ಗವು (ಪುರುಷಾತ್) ಪುರುಷನೆಂಬ ಅಕ್ಷರಬ್ರಹ್ಮದ ದೆಶೆಯಿಂದ (ಸಂಪ್ರಸೂತಾಃ) ಆವಿರ್ಭವಿಸುತ್ತದೆ.

ಅಕ್ಷರದಿಂದ ಕರ್ಮಸಾಧನಗಳು ಮತ್ತು ಫಲಗಳ ಉತ್ಪತ್ತಿ

ತಸ್ಮಾತ್ ಋಚಃ ಸಾಮ ಯಜೂಂಷಿ ದೀಕ್ಷಾ
ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ ।

ಸಂವತ್ಸರಾಶ್ಚ ಯಜಮಾನಶ್ಚ ಲೋಕಾಃ
ಸೋಮೋ ಯತ್ರ ಪವತೇ ಯತ್ರ ಸೂರ್ಯಃ ॥ ೬ ॥

(ತಸ್ಮಾತ್) ಶಕ್ತಿವಿಶಿಷ್ಟ ಪರಶಿವಬ್ರಹ್ಮದ ದೆಶೆಯಿಂದ (ಋಚಃ) ಋಗ್ವೇದ (ಸಾಮ) ಸಾಮವೇದ (ಯಜೂಂಷಿ) ಯಜುರ್ವೇದ (ದೀಕ್ಷಾ) ಜ್ಞಾನಕ್ರಿಯಾರೂಪ ಅಪ್ರಾಕೃತ ದೀಕ್ಷೆಗಳೂ ಮೌಂಜ್ಯಾದಿ ಪ್ರಾಕೃತ ದೀಕ್ಷೆಗಳೂ (ಯಜ್ಞಾಶ್ಚ) ಯೂಪರಹಿತವಾದ ಅಗ್ನಿಹೋತ್ರಾದಿಗಳೂ (ಸರ್ವೇ ಕ್ರತವಃ) ಯೂಪಸಹಿತ ವಿಶ್ವಜಿದ್ಯಾಗಾದಿಗಳು ಮತ್ತು ಪ್ರಾಕೃತಾಪ್ರಾಕೃತ ಶಿವಾರ್ಚನೆ ಹಾಗೂ ಶಿವಯಜ್ಞಾದಿಗಳೂ (ದಕ್ಷಿಣಾಶ್ಚ) ದಕ್ಷಿಣೆಗಳೂ (ಸಂವತ್ಸರಾಶ್ಚ) ಸಂವತ್ಸರಾದಿ ಕಾಲಗಳೂ (ಯಜಮಾನಶ್ಚ) ಯಜಮಾನನೂ (ಲೋಕಾಃ) ಎರಡುವಿಧವಾದ ಆಯಾಕರ್ಮ ಫಲಭೂತವಾದ ಲೋಕಗಳೂ ಎಂದರೆ (ಯತ್ರ) ಯಾವ ನಿತ್ಯಾನಿತ್ಯಲೋಕಗಳಲ್ಲಿ ಕ್ರಮವಾಗಿ (ಸೋಮಃ) ಸಾಂಬನೂ ಮತ್ತು (ಸೂರ್ಯಃ) ಸೂರ್ಯನೂ (ಪವತೇ) ಪ್ರಕಾಶಿಸುವರೋ ಅಂಥ ಲೋಕಗಳು ಉತ್ಪನ್ನವಾಗುತ್ತವೆ.

ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ
ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ ।
ಪ್ರಾಣಾಪಾನೌ ವ್ರೀಹಿಯವೌ ತಪಶ್ಚ
ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥ ೭ ॥

(ತಸ್ಮಾತ್) ಅಕ್ಷರ ಪರಶಿವಬ್ರಹ್ಮದ ದೆಶೆಯಿಂದ (ದೇವಾಃ) ಪೃಥಿವೀ ಮೊದಲಾದ ಭೂತಗಳಿಗೆ ಅಭಿಮಾನಿಗಳೂ ಅಂಗವಾಚ್ಯರೂ ಆದ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ (ಬಹುಧಾ) ನಾನಾವಿಧವಾದವರು (ಸಂಪ್ರಸೂತಾಃ) ಹುಟ್ಟಿದರು. (ಸಾಧ್ಯಾಃ) ಸಾಧ್ಯರೆಂಬ ದೇವತೆಗಳು (ಮನುಷ್ಯಾಃ) ಬ್ರಾಹ್ಮಣಾದಿ ಮಾನವರೂ (ಪಶವಃ) ಗೋ ಮೊದಲಾದ ಪ್ರಾಣಿಗಳೂ (ವಯಾಂಸಿ) ಹಕ್ಕಿಗಳೂ (ಪ್ರಾಣಾಪಾನೌ) ಪ್ರಾಣಿಗಳ ಜೀವನಕ್ಕೆ ಮುಖ್ಯ ಕಾರಣವಾದ ಪಂಚಪ್ರಾಣಗಳೂ (ವ್ರೀಹಿಯವೌ) ಭತ್ತ ಗೋಧಿ ಮುಂತಾದ ಧಾನ್ಯಗಳೂ (ತಪಃ) ಶಿವಪೂಜಾರ್ಥವಾಗಿ ಸಾಮಗ್ರಿ ಸಂಪಾದನೆಗಾಗಿ ಮಾಡುವ ಶರೀರ

(ಕಾಯಕ) ಸಂಶೋಷಣರೂಪವಾದ ತಪಸ್ಸು ಅಥವಾ ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸು (ಶ್ರದ್ಧಾ) ಆಸ್ತಿಕ್ಯ ಬುದ್ಧಿಯೂ (ಸತ್ಯಂ) ಸತ್ಯವಾದ ಮಾತು (ಬ್ರಹ್ಮಚರ್ಯಂ) ಎಂಟುವಿಧವಾದ ಮೈಥುನತ್ಯಾಗ (ವಿಧಿಃ) ನಿತ್ಯನೈಮಿತ್ತಿಕ ಕರ್ಮಗಳ ವಿಧಿಯೂ, ಚಕಾರದಿಂದ ಇನ್ನುಳಿದ ಉಚಿತವಾದುದೆಲ್ಲವೂ ಆ ಪರ ಶಿವಬ್ರಹ್ಮದಿಂದಲೇ ಉತ್ಪನ್ನವಾಯಿತು.

### ಅಕ್ಷರದಿಂದ ಅಧ್ಯಾತ್ಮಪ್ರಾಣಗಳ ಸೃಷ್ಟಿ

ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್
ಸಪ್ತಾರ್ಚಿಷಃ ಸಪ್ತಸಮಿಧಃ ಸಪ್ತಹೋಮಾಃ ।
ಸಪ್ತ ಇಮೇ ಲೋಕಾ ಯೇಷು ಚರಂತಿ ಪ್ರಾಣಾಃ
ಗುಹಾಶಯಾ ನಿಹಿತಾಃ ಸಪ್ತ ಸಪ್ತ ॥ ೮ ॥

(ತಸ್ಮಾತ್) ಆ ಪರಶಿವಬ್ರಹ್ಮದಿಂದ (ಸಪ್ತಪ್ರಾಣಾಃ) ಎರಡು ಕಿವಿ, ಎರಡು ಕಣ್ಣು, ಎರಡು ನಾಸಿಕರಂಧ್ರಗಳು ಒಂದು ವಾಕ್ಕು ಅಂತು ತಲೆಯಲ್ಲಿರುವ ಏಳು ಇಂದ್ರಿಯಗಳೂ (ಪ್ರಭವಂತಿ) ಹುಟ್ಟುತ್ತವೆ. (ಸಪ್ತಾರ್ಚಿಷಃ) ಸಪ್ತ ಇಂದ್ರಿಯವ್ಯಾಪಾರಗಳೂ (ಸಪ್ತಸಮಿಧಃ) ಸಪ್ತವಿಷಯಗಳೂ (ಸಪ್ತ ಹೋಮಾಃ) ಸಪ್ತ ಉಪಾಸನೆಗಳು (ಸಪ್ತ ಇಮೇ ಲೋಕಾಃ) ಸಪ್ತ ಇಂದ್ರಿಯ ಗೋಲಕಗಳೂ (ಯೇಷು ಚರಂತಿ ಪ್ರಾಣಾಃ) ಈ ಸಪ್ತಲೋಕವೆಂಬ ಗೋಲಕಗಳಲ್ಲಿಯೇ ಮೇಲೆ ಹೇಳಿದ ಸಪ್ತ ಪ್ರಾಣಗಳು ಸಂಚರಿಸುವುವು. ಹೀಗೆ (ಸಪ್ತ ಸಪ್ತ) ಏಳೇಳು ಸಂಖ್ಯೆಯ ಈ ಇಂದ್ರಿಯಗಳೂ (ಗುಹಾಶಯಾ) ಪ್ರತಿಯೊಂದು ಪ್ರಾಣಿಯ ಹೃದಯದಲ್ಲಿ (ನಿಹಿತಾಃ) ಸರ್ವೇಶ್ವರನಿಂದ ಸ್ಥಾಪಿಸಲ್ಪಟ್ಟವೆ.

### ಅಥವಾ

(ಸಪ್ತಪ್ರಾಣಾಃ) ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಬುದ್ಧಿ ಎಂಬ ಏಳು ಪ್ರಾಣಗಳೂ (ತಸ್ಮಾತ್) ಆ ಪರಶಿವಬ್ರಹ್ಮದಿಂದ ಹುಟ್ಟುತ್ತವೆ. (ಸಪ್ತಾರ್ಚಿಷಃ) ಗಾರ್ಹಪತ್ಯಾದಿ ಸಪ್ತಾರ್ಚಿಗಳು ಅಂದರೆ ಕಾಲೀಕರಾಲ್ಯಾದಿ ಏಳು ಜಿಹ್ವೆಗಳಿಂದ ಕೂಡಿದ ಅಗ್ನಿಗಳು (ಸಪ್ತಸಮಿಧಃ) ಸಪ್ತಸಮಿತ್ತುಗಳಿಗೆ

ಉಪಕರಣಗಳಾದ ಕಾಲೀಕರಾಲ್ಯಾದಿ ಏಳು ಜಿಹ್ವೆಗಳು (ಇಮೇ) ಕಾಣುತ್ತಿರುವ (ಸಪ್ತಲೋಕಾಃ) ಸಪ್ತಪದದಿಂದ ಉಪಲಕ್ಷಿತವಾದ ಹದಿನಾಲ್ಕು ಲೋಕಗಳೂ (ಪ್ರಭವಂತಿ) ಹುಟ್ಟುತ್ತವೆ. (ಯೇಷು) ಯಾವ ಈ ಚತುರ್ವಿಧ ಭುವನಗಳಲ್ಲಿ (ಪ್ರಾಣಾಃ ಗುಹಾಶಯಾಃ) ಮೇಲೆ ಹೇಳಿದ ಸಪ್ತಪ್ರಾಣಗಳೂ ಕೂಡ ಈಶ್ವರನಿಂದ (ನಿಹಿತಾಃ) ಸ್ಥಾಪಿತವಾಗಿವೆ. ಇಲ್ಲಿ ಸಪ್ತ ಸಪ್ತ ಎಂದು ಎರಡು ಸಲ ಹೇಳಿರುವುದು ಬೇರೆ ಬೇರೆ ಪುರುಷರಲ್ಲಿ ಎಂಬ ಅಭಿಪ್ರಾಯದಿಂದ

## ಅಕ್ಷರದಿಂದ ಬಾಹ್ಯವಸ್ತು ಸೃಷ್ಟಿ

ಅತಃ ಸಮುದ್ರಾ ಗಿರಿಯಶ್ಚ ಸರ್ವೇ
ಅಸ್ಮಾತ್ ಸ್ಯಂದಂತೇ ಸಿಂಧವಃ ಸರ್ವರೂಪಾಃ ।
ಅತಶ್ಚ ಸರ್ವಾ ಓಷಧಯೋ ರಸಾಶ್ಚ
ಯೇನೈಷ ಭೂತಸ್ತಿಷ್ಠತೇ ಹ್ಯಂತರಾತ್ಮಾ ॥ ೯ ॥

(ಅತಃ) ಆ ಪರಶಿವಬ್ರಹ್ಮದ ದೆಶೆಯಿಂದ (ಸಮುದ್ರಾಃ) ಲವಣ, ಇಕ್ಷು ಮೊದಲಾದ ಸಪ್ತ ಸಮುದ್ರಗಳೂ (ಸರ್ವೇ ಗಿರಯಶ್ಚ) ಸಮಸ್ತ ಪರ್ವತಗಳೂ (ಪ್ರಭವಂತಿ) ಹುಟ್ಟುತ್ತವೆ. (ಸರ್ವರೂಪಾಃ ಸಿಂಧವಃ) ಅನೇಕರೂಪವಾದ ನದಿಗಳೂ (ಅಸ್ಮಾತ್) ಆ ಬ್ರಹ್ಮದಿಂದಲೇ (ಸ್ಯಂದಂತೆ) ಹರಿಯುತ್ತವೆ. (ಅತಶ್ಚ) ಈ ಅಕ್ಷರಬ್ರಹ್ಮದಿಂದಲೇ (ಸರ್ವಾ ಓಷಧಯಃ) ಎಲ್ಲ ವಿಧವಾದ ವನಸ್ಪತಿಗಳೂ (ರಸಾಶ್ಚ) ಮಧುರಾದಿ ಷಡ್ರಸಗಳೂ ಹುಟ್ಟುತ್ತವೆ. (ಹಿ) ಯಾವ ಕಾರಣದಿಂದ (ಯೇನ ಅರ್ಥಾತ್ ಯೈಃ ಭೂತೈಃ) ಇಲ್ಲಿ ವಚನ ವ್ಯತ್ಯಾಸವು ಪೃಥಿವ್ಯಾದಿ ಭೂತಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿ ದೇವತೆಗಳ ಜೊತೆಗೆ ಆಧಾರಾದಿ ಸ್ಥಾನಗಳಲ್ಲಿ ಆಯಾ ದೇವತೆಗಳ ಉಪಾಸ್ಯನಾಗಿ (ಅಂತರಾತ್ಮಾ) ಆಯಾ ದೇವತೆಗಳ ಅಂತರ್ಯಾಮಿಯಾಗಿ (ಏಷ) ಈ ಪರಶಿವಬ್ರಹ್ಮನು (ತಿಷ್ಠತೇ) ಇರುತ್ತಾನೆ.

## ಶಿವಾಭೇದೋಪಾಸನೆಯ ಉಪಸಂಹಾರ

ಮೃತ್ತು (ಮಣ್ಣು) ಸಮುದ್ರ ಮತ್ತು ತಂತುಗಳೆಂಬ ಉಪಾದಾನ ಕಾರಣಗಳಿಂದ ಕ್ರಮವಾಗಿ ಉತ್ಪನ್ನವಾದ ಕಾರ್ಯಭೂತಗಳಾದ ಘಟ ತರಂಗ ಮತ್ತು

ಪಟಗಳು ಕಾರಣಗಳಾದ ಆ ಮೃದಾದಿಗಳಿಗೆ ಅಭಿನ್ನವಾಗಿರುವಂತೆ ಶಿವತತ್ತ್ವದಿಂದ ಉತ್ಪನ್ನವಾದ ಸಮಸ್ತ ಜಗತ್ತು ಶಿವತತ್ತ್ವಕ್ಕೆ ಅಭಿನ್ನವಾಗಿರುವುದು. ಆದ್ದರಿಂದ ಎಲ್ಲ ವಸ್ತುಗಳಲ್ಲಿಯೂ ಶಿವಾತ್ಮಕ ಭಾವನೆಯಿಂದಲೇ ಉಪಾಸನೆ ಮಾಡಬೇಕು. ಪಶುಪತಿ ಶಕ್ತಿಪ್ರಾಪ್ತಿಗಾಗಿ ಹೀಗೆಯೇ ಅನುಸಂಧಾನಮಾಡಬೇಕೆಂಬ ವಿಷಯವನ್ನು ಮುಂದಿನ ಮಂತ್ರವು ನಿರೂಪಿಸುತ್ತದೆ.

**ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಂ ।**
**ಏತದ್ಯೋ ವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೌಮ್ಯ ॥ ೧೦ ॥**

ದ್ವಿತೀಯ ಮುಂಡಕೇ ಪ್ರಥಮಃ ಖಂಡಃ

(ಇದಂ ವಿಶ್ವಂ) ಸ್ಥೂಲ ಸೂಕ್ಷ್ಮ ಕಾರಣರೂಪವಾದ ಪೃಥಿವಿ ಮೊದಲು ಮಾಯೆಯವರೆಗಿನ ಸಮಸ್ತ ಪ್ರಪಂಚವೂ ಪರಶಿವಬ್ರಹ್ಮದಿಂದ ಉತ್ಪನ್ನವಾಗಿರುವುದರಿಂದ ಅದು (ಪುರುಷ ಏವ) ಪರಮಕಾರಣವಾದ ಪರಮಾತ್ಮ ರೂಪ ಲಿಂಗವೇ ಆಗಿದೆ. (ಕರ್ಮ) ಕರ್ಮವೆಂಬ ಶರೀರವುಳ್ಳ ಇಷ್ಟಲಿಂಗವು (ತಪಃ) ಜ್ಞಾನಕ್ಕೆ ವಿಷಯವಾದ ಪ್ರಾಣಲಿಂಗವು (ಬ್ರಹ್ಮ) ಭಾವಲಿಂಗವು; (ಏತತ್) ಸರ್ವಾತ್ಮಕ ಪರಶಿವ ರೂಪವಾದ ಊರ್ಧ್ವಲಿಂಗವು (ಗುಹಾಯಾಂ) ಸರ್ವ ಪ್ರಾಣಿಗಳ ಆಧಾರ ಹೃದಯ ಮತ್ತು ಭ್ರೂಮಧ್ಯಗಳಲ್ಲಿ (ನಿಹಿತಂ) ಲಿಂಗರೂಪದಿಂದ ಇರುವುದೆಂಬುದನ್ನು (ಯಃ) ಯಾವ ಅಧಿಕಾರಿಯಾದ ಶುದ್ಧಾತ್ಮನು (ವೇದ) ಸ್ವಸಾಮರಸ್ಯದಿಂದ ತಿಳಿಯುವನೋ (ಸಃ) ಅಂಥ ಸಾಧಕನು (ಇಹ) ಇದೇ ಜನ್ಮದಲ್ಲಿಯೇ (ಅವಿದ್ಯಾಗ್ರಂಥಿಂ) 'ನಾನು ಶಿವನಲ್ಲ' ಎಂಬ ಭೇದರೂಪ ಅವಿದ್ಯೆ(ಅಜ್ಞಾನ)ಯನ್ನು (ಸೌಮ್ಯ) ಎಲೈ ಪ್ರಿಯಶಿಷ್ಯನೆ. (ವಿಕಿರತಿ) ಬಿಟ್ಟುಬಿಡುತ್ತಾನೆ,

**ದ್ವಿತೀಯ ಮುಂಡಕದಲ್ಲಿ ಪ್ರಥಮಖಂಡವು ಮುಗಿದುದು**



# ದ್ವಿತೀಯ ಮುಂಡಕ ದ್ವಿತೀಯ ಖಂಡ

## ಪ್ರಸಾದಿಸ್ಥಲ

### ಪ್ರಸಾದೋಪಭೋಗದ ಹಿರಿಮೆ

ಹಿಂದೆ ಶಿವಜಗನ್ಮಯಸ್ಥಲದ ಸ್ವರೂಪವನ್ನು ಪ್ರತಿಪಾದಿಸಿ ಆ ಪರಶಿವ ಮಹಾಲಿಂಗದಲ್ಲಿ ವಿಶ್ವಾಭೇದಾನುಸಂಧಾನರೂಪವಾದ ಉಪಾಯವನ್ನು ಹೇಳಿ ಮುಂದೆ ಆ ಪರಶಿವಲಿಂಗದಿಂದ ಉತ್ಪನ್ನವಾದ ವಿಶ್ವವನ್ನು ಇಷ್ಟಪ್ರಾಣಭಾವ ರೂಪ ಬ್ರಹ್ಮದಲ್ಲಿ ಸಮರ್ಥಿಸಿ ತರುವಾಯ ಹಾಗೆ ಅರ್ಪಿತವಾದ ವಿಶ್ವವನ್ನು ಶಿವಪ್ರಸಾದವೆಂದು ಭಾವಿಸಿ ಅನುಭವಿಸಬೇಕಲ್ಲದೆ ಪದಾರ್ಥರೂಪದಿಂದ ಅನುಭವಿಸಬಾರದೆಂದು ಮುಂದಿನ ಮಂತ್ರವು ಹೇಳುತ್ತದೆ.

ಆವಿಃ ಸನ್ನಿಹಿತಂ ಗುಹಾಚರಂ ನಾಮ
ಮಹತ್ಪದಮತ್ರೈತತ್ಸಮರ್ಪಿತಮ್ ।
ಏಜತ್ಪ್ರಾಣನ್ನಿಮಿಷಚ್ಚ ಯದೇತಜ್ಜಾನಥ
ಸದಸದ್ವರೇಣ್ಯಂ ಪರಂ ವಿಜ್ಞಾನಾತ್ ವರಿಷ್ಠಂ ಪ್ರಜಾ
ನಾಮ್ ॥ ೧ ॥

[ಗುಹಾಚರಂ] ಸರ್ವಪ್ರಾಣಿಗಳ ಹೃದಯಗಳೆಂಬ ಗುಹೆಗಳಲ್ಲಿ ವಾಸಿಸುವ [ನಾಮ] ಹಿಂದೆ ಹೇಳಿದ ಪ್ರಸಿದ್ಧವಾದ ಅಕ್ಷರಬ್ರಹ್ಮವೇ [ಮಹತ್] ಮಹಾಲಿಂಗರೂಪವಾದ [ಪದಂ] ಸ್ಥಲವೆನಿಸುವುದು. ಈ ಮಹಾಲಿಂಗವು [ಆವಿಃ] ಗುರುಚರ ಇಷ್ಟರೂಪದಿಂದ ಬಾಹ್ಯೇಂದ್ರಿಯಗ್ರಾಹ್ಯವಾಗಿ ಆವಿರ್ಭವಿಸಿತು. ಹೀಗೆ ಪ್ರಕಟವಾದ ಮಹಾಲಿಂಗವು [ಸನ್ನಿಹಿತಂ] ಭಕ್ತರ ಅರ್ಚನೆಗಾಗಿ ಅವರವರ ಸಮೀಪದಲ್ಲಿಯೇ ಇದೆ. [ಅತ್ರ] ಈ ಪರಶಿವ ಮಹಾಲಿಂಗದಲ್ಲಿ [ಏತತ್] ಮುಂದೆ ಹೇಳುವ ಸ್ಥೂಲ ಸೂಕ್ಷ್ಮ ಕಾರಣ ರೂಪವೂ ಮಲರೂಪವೂ ತನಗೆ ಭೋಗ್ಯವೂ ಆದ ಮೂರು ದ್ರವ್ಯಗಳನ್ನು [ಸಮರ್ಪಿತಂ]

ವಿಶ್ವಾದಿ ಜೀವಾತ್ಮರು ತಮ್ಮ ಶುದ್ಧಿಗಾಗಿ ಪ್ರವಿಲಾಪನಗೊಳಿಸಬೇಕು. ಅರ್ಪಣಕ್ಕೆ ಯೋಗ್ಯವಾದ ದ್ರವ್ಯಗಳಾವುವೆಂದರೆ [ಏಜತ್] ಪೃಥಿವಿಯಿಂದ ಪುರುಷತತ್ತ್ವದ ವರೆಗಿನ ಜಾಗ್ರತ್ ಪ್ರಪಂಚವು ಕಂಪಮಾನವೂ ಬಹಿರಂತಃಕರಣಗ್ರಾಹ್ಯವೂ ಆದ್ದರಿಂದ ಈ ಸ್ಥೂಲಪ್ರಪಂಚವು [ಪ್ರಾಣತ್] ಕೇವಲ ಮನೋಮಾತ್ರಜ್ಞಾನಕ್ಕೆ ವಿಷಯವಾದ ಸ್ವಪ್ನ ಸಂಬಂಧವಾದ ಪ್ರವಿವಿಕ್ತವೆನಿಸುವ ಸೂಕ್ಷ್ಮಪ್ರಪಂಚವೂ [ನಿಮಿಷಚ್ಚ] ಅಂತರ್ಬಹಿಃಕರಣವ್ಯಾಪಾರವಿಲ್ಲದೆ ಕೇವಲ ಆನಂದರೂಪವಾದ ಸುಷುಪ್ತಿ ಎನಿಸುವ ಮಾಯಾಮಯ ಪ್ರಪಂಚವು ಅರ್ಥಾತ್ ರೂಪ [ಸ್ಥೂಲ] ರುಚಿ [ಸೂಕ್ಷ್ಮ] ತೃಪ್ತಿ [ಆನಂದ] ವೆಂಬ ಜಾಗ್ರತ್‌ಸ್ವಪ್ನ ಸುಷುಪ್ತಿಗಳು ಅರ್ಪಣಕ್ಕೆ ಅರ್ಹವಾಗಿರುವುವು ಎಂದು ಅರ್ಥ. ಚಕಾರವು ಸಮುಚ್ಚಯಾರ್ಥಕ [ಯದೇತತ್] ಸ್ಥೂಲಸೂಕ್ಷ್ಮಕಾರಣರೂಪವಾದ ಈ ಮಲಗಳು ಪೃಥಿವಿ ಮೊದಲು ಮಾಯಾತತ್ವದವರೆಗೆ ಅಕ್ಕಿಯಮೇಲೆ ತುಷ, ಕಂಬುಕ. ಕಿಂಶಾರುಕ ಎಂಬ ಹೊಟ್ಟು ತವುಡುಗಳಿರುವಂತೆ ಪುರುಷನಿಗೆ ಆವರಣಗಳಾಗಿರುತ್ತವೆ. ಈ ಮಲಗಳಿಗೆ ಸ್ಥೂಲಾದಿ ದೇಹಗಳೆಂದೂ ಕೋಶತ್ರಯವೆಂದೂ ಹೆಸರು. ದೀಕ್ಷಾತ್ರಯದಿಂದ ಮೂರು ಮಲಗಳೂ ನಾಶವಾಗಿ ಇಷ್ಟಾದಿ ಲಿಂಗತ್ರಯಕ್ಕೆ ಅರ್ಪಿತವಾಗಬೇಕು. ಈ ಮೂರು ಲಿಂಗಗಳೂ ಕಡೆಗೆ ಮಹಾಲಿಂಗದಲ್ಲಿ ಅಂತರ್ಭಾವವಾಗುವುದರಿಂದ ಅಂಥ ಮಹಾಲಿಂಗವೊಂದನ್ನೇ [ಜಾನಥ] ಭೋಕ್ತೃ ಭೋಗ್ಯ ಭೋಗರೂಪವೆಂದು ತಿಳಿಯಿರಿ. ಅಂದರೆ ಇದೆಲ್ಲವೂ ಒಂದೆಂದು ಭಾವಿಸಿರಿ. ಆ ಮಹಾಲಿಂಗವು [ಸದಸತ್] ಸ್ಥೂಲಸೂಕ್ಷ್ಮಕಾರಣಾಭಿಮಾನಿಗಳಾದ ವಿಶ್ವ ತೈಜಸ ಪ್ರಾಜ್ಞರೆಂಬ ಜೀವರಿಂದ [ವರೇಣ್ಯಂ] ಉಪಾಸ್ಯವಾದುದು. [ವಿಜ್ಞಾನಾತ್] ಜೀವನ ದೆಶೆಯಿಂದ [ಪರಂ] ಬೇರೆಯಾದುದು. ಮತ್ತು ಆ ವಸ್ತುವು [ಪ್ರಜಾನಾಂ] ಬ್ರಹ್ಮ ವಿಷ್ಣು ಮೊದಲಾದ ಜೀವರಿಗೆ [ವರಿಷ್ಠಂ] ಸರ್ವಶ್ರೇಷ್ಠದಾದುದು.

**ಯದರ್ಚಿಮತ್ ಯದಣುಭ್ಯೋಽಣು ಚ**
**ಯಸ್ಮಿಂ ಲೋಕಾ ನಿಹಿತಾ ಲೋಕಿನಶ್ಚ ।**
**ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದುವಾಙ್ಮನಃ**
**ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ ಸೌಮ್ಯ ವಿದ್ಧಿ ।೨।**

[ಸೌಮ್ಯ] ಎಲೈ ಪ್ರಿಯ ಶಿಷ್ಯನೆ, [ಯತ್] ಯಾವ ಪರಶಿವಮಹಾಲಿಂಗವು(ಅರ್ಚಿಮತ್)ಸರ್ವಶ್ರೇಷ್ಠಪ್ರಕಾಶವುಳ್ಳುದೊ(ಯತ್)ಯಾವುದು[ಅಣುಭ್ಯಃ]ಸೂಕ್ಷ್ಮವಾದವುಗಳಿಗಿಂತಲೂ[ಅಣು]ಸೂಕ್ಷ್ಮವಾಗಿದೆಯೊ, ಚಕಾರದಿಂದ ಯಾವುದು ಸ್ಥೂಲವಾದ ಪೃಥಿವ್ಯಾದಿಗಳಿಗಿಂತ ಸ್ಥೂಲವಾಗಿದೆಯೋ [ಯಸ್ಮಿನ್] ಯಾವ ಪರಶಿವ ಮಹಾಲಿಂಗದಲ್ಲಿ [ಲೋಕಾಃ] ಭುವರಾದಿ ಲೋಕಗಳೂ [ಲೋಕಿನಶ್ಚ] ಲೋಕವಾಸಿಗಳಾದ ದೇವ ಮಾನವ ದಾನವಾದಿಗಳು [ನಿಹಿತಾಃ] ಇರುವರೋ [ತದೇತದಕ್ಷರಂ ಬ್ರಹ್ಮ] ಆ ಪರಶಿವ ಮಹಾಲಿಂಗವೇ ಅಕ್ಷರ ಬ್ರಹ್ಮವೆನಿಸುವುದು. [ಸಃ] ಆ ಪರಶಿವ ಮಹಾಲಿಂಗವೇ [ಪ್ರಾಣಃ] ಪ್ರಾಣವನ್ನು ಪ್ರೇರಿಸುವುದರಿಂದ ಪ್ರಾಣಲಿಂಗವೆನಿಸುವುದು. [ತದು] ಅದೇ [ವಾಕ್] ವಾಕ್‌ಪ್ರೇರಕವಾದ್ದರಿಂದ ಪ್ರಸಾದಲಿಂಗ [ತದು] ಅದೇ [ಮನಃ] ಮನಸ್ಸನ್ನು ಪ್ರೇರಿಸುವುದರಿಂದ ಮಹಾಲಿಂಗ. [ತದೇತತ್] ಅಂತಃಕರಣ ಬಾಹ್ಯಕರಣ ಪ್ರೇರಕ ಮಹಾಲಿಂಗವೇ [ಸತ್ಯಂ] ಸದ್‌ರೂಪ ಭಾವಲಿಂಗವು [ತದೇತತ್] ಅದೇ [ಅಮೃತಂ] ಆನಂದರೂಪ ಇಷ್ಟಲಿಂಗವೂ ಆಗಿದೆ. [ತತ್] ಆ ಪರಶಿವ ಮಹಾಲಿಂಗವನ್ನೇ [ವೇದ್ಧವ್ಯಂ] ದೃಕ್ ಮನಸ್ಸು ಮತ್ತು ಭಾವಗಳಿಂದ ಭಾವಿಸಬೇಕು. ಅಂದರೆ ಬಾಹ್ಯವಾದ ಇಷ್ಟದಲ್ಲಿ ದೃಷ್ಟಿಯನ್ನು ಸ್ಥಿರಗೊಳಿಸಿ. ಅಂತರ್ಲಕ್ಷ್ಯವಾದ ಪ್ರಾಣಲಿಂಗ ಭಾವಲಿಂಗಗಳಲ್ಲಿ ಮನೋಭಾವಗಳನ್ನು ಸ್ಥಿರಗೊಳಿಸಬೇಕು. ಈ ಮಾರ್ಗದಿಂದ [ವಿದ್ಧಿ] ಉಪಾಸನೆಮಾಡಬೇಕೆಂದು. ತಿಳಿ.

### ಪ್ರಣವೋಪಾಸನೆ ಅಥವಾ ಅಂತರ್ಲಕ್ಷ್ಯ ವೇಧನಕ್ರಮ.

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ
ಶರಂ ಹ್ಯುಪಾಸಾನಿಶಿತಂ ಸಂದಧೀತ ।
ಆಯಮ್ಯ ತದ್ಭಾವಗತೇನ ಚೇತಸಾ
ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥ ೩ ॥

[ಮಹಾಸ್ತ್ರಂ] ಮಹಾಯುಧರೂಪವಾದ [ಔಪನಿಷದಂ] ಉಪನಿಷತ್ತಿನಲ್ಲಿ ಪ್ರಸಿದ್ಧವೂ ಪಂಚಾಕ್ಷರ ಕಲ್ಪವೃಕ್ಷಕ್ಕೆ ಬೀಜರೂಪವೂ ಆದ ಪ್ರಣವವೆಂಬ [ಧನುಃ] ಮಹಾಧನಸ್ಸನ್ನು [ಗೃಹೀತ್ವಾ] ಗುರುಮುಖದಿಂದ ಉಪದೇಶದ

ಮೂಲಕ ಪಡೆದು ಆದರಲ್ಲಿ [ಉಪಾಸಾ] ಇಷ್ಟಪ್ರಾಣ ಭಾವಲಿಂಗಾನುಸಂಧಾನ ರೂಪವಾದ 'ತ್ರಿಪುಟ್ಯನುಸಂಧಾನ' ವೆಂಬ [ನಿಶಿತಂ] ಶುದ್ಧವಾದ [ಶರಂ] ಆತ್ಮವೆಂಬ ಬಾಣವನ್ನು [ಸಂದಧೀತ] ಯೋಜಿಸಬೇಕು. ಹೇಗೆಂದರೆ [ತದ್ಭಾವಗತೇನ] ಅಹಂಭಾವಸಂಕೋಚವಳಿದು ಆ ಪರಶಿವನೇ ನಾನೆಂಬ ವಿಶ್ವಾಕಾರ ಪರಾಹಂತಾಮಯವಾದ ಸ್ವಸ್ವರೂಪಾನುಭವವನ್ನು ಹೊಂದಿದ [ಚೇತಸಾ] ಮನಸ್ಸಿನಿಂದ ಎಂದರೆ ಚಿಚ್ಛಕ್ತಿರೂಪವಾಧ ಭಾವಹಸ್ತದಿಂದ [ಆಯಮ್ಯ] ಆಕರ್ಷಿಸಿ ಎಂದರೆ ಆಯಾ ವಿಷಯಗಳಿಂದ ಹಿಂದಿರುಗಿಸಿ [ತದೇವ] ಅದೇ [ಅಕ್ಷರಂ] ಪರಶಿವ ಮಹಾಲಿಂಗವೇ [ಲಕ್ಷ್ಯಂ] ಗುರಿಯೆಂದು [ವಿದ್ಧಿ] ಹೊಡೆ ಎಂದರೆ ತಿಳಿದುಕೋ.

ಹಿಂದಿನ ಮಂತ್ರಾರ್ಥವನ್ನೇ ಈ ಮಂತ್ರವೂ ವಿವರಿಸುತ್ತದೆ.

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥ ೪ ॥

[ಪ್ರಣವಃ] ಓಂಕಾರವೇ [ಧನುಃ] ಧನುಸ್ಸು [ಶರೋ ಹಿ] ಬಾಣವೇ [ಆತ್ಮಾ] ಶುದ್ಧಾತ್ಮನು. [ಬ್ರಹ್ಮ] ಪರಶಿವ ಮಹಾಲಿಂಗವು [ತಲ್ಲಕ್ಷ್ಯಂ] ಆ ಜೀವನೆಂಬ ಶರಕ್ಕೆ ಗುರಿ. ಇಂಥ ಲಕ್ಷ್ಯವನ್ನು [ಅಪ್ರಮತ್ತೇನ] ಪ್ರಮಾದ ರಹಿತವಾದ ಎಂದರೆ ಬಾಹ್ಯ ನಶ್ವರ ವಿಷಯಗಳಲ್ಲಿರುವ ಶ್ರದ್ಧಾದಿಗಳಿಲ್ಲದೆ ಕೇವಲ ಅಂತರಂಗದಲ್ಲಿರುವ ಆಧಾರಾದಿ ಷಟ್ಚಕ್ರದಲ್ಲಿ ಆಚಾರಾದಿ ಲಿಂಗಗಳಲ್ಲಿ ಶ್ರದ್ಧಾದಿ ಭಕ್ತಿಯಿಟ್ಟು [ವೇದ್ಧವ್ಯಂ] ಆ ಮಹಾಲಿಂಗವೆಂಬ ಲಕ್ಷ್ಯವನ್ನು ವೇಧಿಸಬೇಕು. ಲಕ್ಷ್ಯವೇಧನವಾದ ತರುವಾಯ [ಶರವತ್] ಗುರಿಯನ್ನು ತಗಲಿದ ಬಾಣದಂತೆ ಎಂದರೆ ಬಾಣವು ಲಕ್ಷ್ಯದಲ್ಲಿ ತೂರಿ ಐಕ್ಯವಾಗುವಂತೆ ಶುದ್ಧಾತ್ಮನಾದ ಜೀವನೂ ಸಹ ಲಕ್ಷ್ಯವಾದ ಪರಶಿವಲಿಂಗದಲ್ಲಿ ಪ್ರವೇಶಿಸಿ [ತನ್ಮಯೋ ಭವೇತ್] ಮಹಾಲಿಂಗವಾಗಿ ಆಗಬೇಕು.

## ಅಕ್ಷರ ಸಮಾವೇಶ ವಿಧಾನ

ಯಸ್ಮಿನ್ ದ್ಯೌಃ ಪೃಥಿವೀಚಾಂತರಿಕ್ಷ
ಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ।

ತಮೇವೈಕಂ ಜಾನಥ ಆತ್ಮಾನ-
ಮನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ||೫||

[ಯಸ್ಮಿನ್] ಯಾವ ಪರಶಿವ ಮಹಾಲಿಂಗದಲ್ಲಿ [ದ್ಯೌಃ] ಸ್ವಪ್ರಕಾಶ ರೂಪವಾದ ಶಕ್ತಿಯೂ (ಪೃಥಿವೀ) ಭೂಮಿಯೂ (ಅಂತರಿಕ್ಷಂ) ಗಗನವೂ (ಓತಂ) ಸಮರ್ಪಿತವಾದವೊ, ಚಕಾರದಿಂದ ಜಲ ಮೊದಲಾದ ಇತರ ಭೂತ ಗಳೂ ಸಮರ್ಪಿತವಾದುವೆಂದು ತಿಳಿಯಬೇಕು. (ಸಹ ಪ್ರಾಣೈಶ್ಚ ಸರ್ವೈಃ) ಹೊರಗಿನ ಮತ್ತು ಒಳಗಿನ ಇಂದ್ರಿಯಗಳೊಡನೆ (ಮನಃ) ಮನಸ್ಸು (ಯಸ್ಮಿನ್) ಯಾವ ಪರಶಿವ ಮಹಾಲಿಂಗದಲ್ಲಿ (ಓತಂ) ಸಮರ್ಪಿಸಲ್ಪಟ್ಟಿದೆಯೋ ಅಂಥ (ತಮೇವ) ಎಲ್ಲ ಭೂತ ಮತ್ತು ಭೌತಿಕಾದಿಗಳಿಗೆ ಅಧಿಷ್ಠಾನವಾಗಿರುವ ಹಾಗೂ (ಏಕಂ) ಅದ್ವಿತೀಯವಾಗಿರುವ (ಆತ್ಮಾನಂ) ಪರಶಿವ ಮಹಾಲಿಂಗವನ್ನು (ಜಾನಥ) ನಿಮಗೆ ಅಭಿನ್ನರೂಪದಿಂದ ತಿಳಿಯಿರಿ. (ಅನ್ಯಾಃ) ಷಟ್‌ಸ್ಥಲ ಬ್ರಹ್ಮಕ್ಕೆ ಭಿನ್ನವಾದ (ವಾಚಃ) ಪಶುಧರ್ಮಪರವಾದ ಪೂರ್ವಕಾಂಡವೇದ ಭಾಗವನ್ನು (ವಿಮುಂಚಥ) ಬಿಟ್ಟುಬಿಡಿರಿ. ಏಕೆಂದರೆ (ಏಷಃ) ಈ ಷಟ್‌ಸ್ಥಲ ಬ್ರಹ್ಮಬೋಧಕವಾದ ಪರವಿದ್ಯೆಯೆನಿಸುವ ಪ್ರಣವಸಹಿತ ಪಂಚಾಕ್ಷರ ಮಂತ್ರವು ತನ್ನ ಶ್ರವಣ ಮನನ ನಿಧಿಧ್ಯಾಸಗಳ ಮೂಲಕ (ಅಮೃತಸ್ಯ) ಮೋಕ್ಷಕ್ಕೆ (ಸೇತುಃ) ಸೇತುವೆಯಂತೆ ಸಂಸಾರ ಸಾಗರವನ್ನು ದಾಟಿಸುವ ಮೋಕ್ಷಪ್ರಾಪ್ತಿಯ ಉಪಾಯವಾಗಿದೆ.

ಏನೆಂದು ಧ್ಯಾನಿಸಬೇಕೆಂಬುದನ್ನು ಮುಂದಿನ ಮಂತ್ರವು ಹೇಳುತ್ತದೆ.

ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ
ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ ।
ಓಮಿತ್ಯೇವಂ ಧ್ಯಾಯಥ ಆತ್ಮಾನಂ
ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್ ॥ ೬ ॥

[ರಥನಾಭೌ] ಬಂಡಿಯ ಚಕ್ರಗುಂಭದಲ್ಲಿ [ಅರಾ ಇವ] ಅರೆ ಕಾಲುಗ ಳಂತೆ [ಯತ್ರ] ಯಾವ ಹೃದಯದಲ್ಲಿ (ನಾಡ್ಯಃ) ನರಗಳು (ಸಂಹತಾಃ) ಕೂಡಿರುವುವೊ ಅಂಥ ಹೃದಯದಲ್ಲಿ [ಸ ಏಷಃ]ಹಿಂದೆ ಉಕ್ತನಾದ ಪರಶಿವನು

[ಚರತೇ] ಸಂಚರಿಸುತ್ತಾನೆ. ಅಂದರೆ ಭಕ್ತರ ಧ್ಯಾನಕ್ಕಾಗಿ ಪ್ರಾಣಲಿಂಗ ರೂಪದಿಂದ ಇರುತ್ತಾನೆ. [ಸಃ] ಅವನು (ಬಹುಧಾ ಜಾಯಮಾನಃ) ಭಕ್ತರ ಅನುಗ್ರಹಕ್ಕಾಗಿ ಸೋಮಶೇಖರ ಮೊದಲಾದ ಲೀಲೆಗಳಿಂದ ಆವಿರ್ಭವಿಸುತ್ತಾನೆ. (ತಂ ಆತ್ಮಾನಂ) ಅಂಥ ಪರಶಿವನನ್ನು (ಓಮಿತ್ಯೇವ) ಎಲ್ಲಕ್ಕೂ ಉಪಾದಾನವಾದ ಪ್ರಣವಮಯಚಿಚ್ಛಕ್ತಿ ವಿಶಿಷ್ಟನನ್ನಾಗಿಯೇ (ಧ್ಯಾಯಥ) ಧ್ಯಾನಿಸಿರಿ. ಎಂದರೆ ಎಲೈ ಶಿಷ್ಯರೆ, ನೀವು ಸ್ವಸಾಮರಸ್ಯದಿಂದ ಭಾವಿಸಿರಿ. ಏಕೆಂದರೆ (ತಮಸಃ ಪರಸ್ತಾತ್) ತಮೋಮಯವಾದ ಮಾಯಾತತ್ತ್ವಕ್ಕಿಂತ (ಪರಸ್ತಾತ್) ಶುದ್ಧ ಸತ್ವದಲ್ಲಿರುವ (ಪಾರಾಯ) ಪರಶಿವ ಮಹಾಲಿಂಗದ ಪ್ರಾಪ್ತಿಯೆಂಬ ಮೋಕ್ಷವು ಲಭಿಸುತ್ತದೆ. (ಏವಂ) ಹೀಗೆ ಧ್ಯಾನಾಭ್ಯಾಸಗಳಲ್ಲಿ ಪ್ರವೃತ್ತರಾದ (ವಃ) ನಿಮಗೆ (ಸ್ವಸ್ತಿ) ಮಂಗಳವಾಗಲಿ.

'ತನುತ್ರಯಗತನಾದಿಮಲತ್ರಯಮಸೌ ಗುರುಃ' ಎಂಬ ಶಿವಾಗಮ ಪ್ರಮಾಣದಂತೆ ಮುಂದಿನ ಮಂತ್ರವು ಇಷ್ಟಾದಿ ಲಿಂಗತ್ರಯವನ್ನು ಬೋಧಿಸುತ್ತದೆ.

ಯಸ್ಸರ್ವಜ್ಞಸ್ಸರ್ವವಿದ್ಯಸ್ಯೈಷ ಮಹಿಮಾ ಭುವಿ
ದಿವ್ಯೇ ಬ್ರಹ್ಮಪುರೇ ಹ್ಯೇಷವ್ಯೋಮನ್ಯಾತ್ಮಾ ಪ್ರತಿಷ್ಠಿತಃ ।

ಮನೋಮಯಃ ಪ್ರಾಣಶರೀರನೇತಾ
ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ।
ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ
ಆನಂದರೂಪಮಮೃತಂ ಯದ್ವಿಭಾತಿ ॥ ೭ ॥

(ಯಸ್ಸರ್ವಜ್ಞಃ ಸರ್ವವಿತ್) ಸರ್ವಜ್ಞಾತ್ವಾದಿ ಆರು ಅಂಗಗಳುಳ್ಳ ಸರ್ವವನ್ನೂ ತಿಳಿದಿರುವ ಯಾವ ಪರಶಿವನಿರುವನೋ (ಯಸ್ಯ) ಯಾವ ಪರಶಿವಮಹಾಲಿಂಗಕ್ಕೆ (ಭುವಿ) ಭೂಲೋಕದಲ್ಲಿ (ಏಷ ಮಹಿಮಾ) ಭಕ್ತಾನುಗ್ರಹಕ್ಕಾಗಿ ಗುರು ಲಿಂಗ ಜಂಗಮರೂಪವಾದ ವಿಭೂತಿಯು ಪ್ರತ್ಯಕ್ಷ ಸಿದ್ಧವಾಗಿರುವುದೋ (ಸಃ) ಸರ್ವಜ್ಞನಾದ (ಏಷ ಆತ್ಮಾ) ಈ ಪರಶಿವನು (ದಿವ್ಯೇ) ಪ್ರಕಾಶಮಾನವಾದ (ಬ್ರಹ್ಮ ಪುರೇ) ಬ್ರಹ್ಮನ ಆವಾಸಸ್ಥಾನವಾದ ಯೋಗಾಂಗವೆಂಬ

